The Indian Institute of World Culture,
... B. P. Wadia Road,
Bangalore-4, India

# ಚಂದಮಾಮ

ಸಂಸ್ಥಾಪಕರು : ನಾಗಿರೆಡ್ಡಿ
ಸಂಚಾಲಕರು : 'ಚಕ್ರಪಾಣಿ'

**ಸಾ**ಧಾರಣವಾಗಿ ಎಲ್ಲರೂ ಮನುಷ್ಯರ ಯೋಗ್ಯತೆಯನ್ನು ಹಣದಿಂದಲೇ ಅಳೆಯುತ್ತಾರೆ. ಎಷ್ಟು ಹೆಚ್ಚು ಧನವಂತನಾದವನು ಅಷ್ಟು ಹೆಚ್ಚು ಯೋಗ್ಯನೆಂದು ಜನರಿಗೆ ಕಾಣುತ್ತದೆ. ಅವನು ಧನವನ್ನು ಹೇಗೆ ಸಂಪಾದಿಸಿದನೆಂಬುದನ್ನು ಗಣನೆಗೆ ತರುವುದಿಲ್ಲ; ಧನ ಸಂಪಾದನೆ ಮಾಡಿದವನೇ ಪ್ರಯೋಜಕನೆಂದು ಲೋಕವು ಅಂದುಕೊಳ್ಳುತ್ತದೆ. ಅವನಿಗೆ ಎಲ್ಲಾ ಬಗೆಯ ಸತ್ಕಾರಗಳೂ ಲಭಿಸುತ್ತವೆ. ಕೆಲವರು ಪ್ರಯೋಜಕರಾಗಿದ್ದು ಕೂಡಾ ಸತ್ಕಾರಗಳನ್ನು ಲಕ್ಷಿಸುವುದಿಲ್ಲ. ಅಂಥವರೇ ನಿಜವಾದ ಪ್ರಯೋಜಕರೆಂದು "ಪ್ರಯೋಜಕತೆ" ಎಂಬ ಕಥೆಯಲ್ಲಿದೆ.

ಸಂಪುಟ: ೫೫ ] ಜೂನ್ '೭೫ [ ಸಂಚಿಕೆ : ೬




PLEASE HANDLE WITH CARE

CHITRA



# ಮಿತ್ರಭೇದ

೨೩

### ನಾಗಕುಮಾರನ ಕಥೆ

ರಾಜಗೃಹವೆಂಬ ನಗರದಲ್ಲಿ ದೇವಶರ್ಮನೆಂಬ ಒಬ್ಬ ಬ್ರಾಹ್ಮಣನಿದ್ದ. ಅವನಿಗೆ ಮದುವೆಯಾಗಿ ಎಷ್ಟು ವರ್ಷಗಳಾದರೂ ಮಕ್ಕಳೇ ಆಗಲಿಲ್ಲ. ಅವನ ಹೆಂಡತಿ ಬೇರೆಯವರ ಮಕ್ಕಳನ್ನು ನೋಡಿದಾಗಲೆಲ್ಲಾ ಎದೆಯೊಡೆಯುವ ಹಾಗೆ ಅಳುತ್ತಿದ್ದಳು. ಬ್ರಾಹ್ಮಣನಿಗಾದರೋ ಹೆಂಡತಿಯ ಮೇಲೆ ಅತ್ಯಂತ ಪ್ರೇಮವಿತ್ತು. ಒಂದು ದಿನ ಅವನು ಒಂದು ನಿಶ್ಚಯಕ್ಕೆ ಬಂದು, ತನ್ನ ಹೆಂಡತಿಯನ್ನು ನೋಡಿ, "ಪ್ರಿಯಳೇ, ನೀನಿನ್ನು ಅಳುವುದನ್ನು ಬಿಟ್ಟುಬಿಡು. ನಾನು ಪುತ್ರಕಾಮೇಷ್ಟಿ ಮಾಡುವುದೆಂದು ನಿಶ್ಚಯಿಸಿದ್ದೇನೆ. ಆಗ ಯಾವ ದೇವರೋ ಪ್ರತ್ಯಕ್ಷವಾಗಿ ಶ್ರವಣಾನಂದವಾಗುವಂತೆ, ಎಲೈ ಬ್ರಾಹ್ಮಣನೇ, ಸೌಂದರ್ಯದಲ್ಲಿ ಎಲ್ಲರನ್ನೂ ಮೀರಿಸುವಂತೆ, ದೀರ್ಘಾಯುವಾಗಿ, ಅಡಿಗಡಿಗೂ ಒಳ್ಳೆಯ ಅದೃಷ್ಟ ಬರುವಂತಹ ಮಗನು ನಿನಗೆ ಹುಟ್ಟುವನು ಎಂದು ಹೇಳುತ್ತಾ ವರ ಕೊಡುತ್ತಾನೆ. ಚಿಂತೆ ಬಿಡು" ಎಂದನು. ಆ ಮಾತು ಕೇಳಿ ಬ್ರಾಹ್ಮಣನ ಹೆಂಡತಿ ತುಂಬ ನಂಬುಗೆಯಿಂದ ಸಂತೋಷಗೊಂಡು, "ಹಾಗೆಯೇ ಮಾಡಿ" ಎಂದಳು. ಆಮೇಲೆ ಬ್ರಾಹ್ಮಣನು ಯಥಾವಿಧಿಯಾಗಿ ಪುತ್ರಕಾಮೇಷ್ಟಿಯನ್ನು ಮಾಡಿ ಮುಗಿಸಿದನು. ಅದರ ಫಲ ಹುಸಿಹೋಗದಂತೆ ಅವನ ಹೆಂಡತಿ ಗರ್ಭವತಿಯಾಗಿ ಸಂತೋಷಪಟ್ಟಳು.

ಮಗನು ಹುಟ್ಟುವನೆಂಬ ಆಶೆಯಿಂದ ಗಂಡ-ಹೆಂಡಿರು ಬಹಳಷ್ಟು ಗಾಳಿಗೋಪುರ ಕಟ್ಟಿದರು. ಕಡೆಗೆ ಅವಳು ಮಗನನ್ನು ಹಡೆಯುವುದಕ್ಕೆ ಬದಲಾಗಿ, ಒಂದು ಹಾವನ್ನು ಹಡೆದಳು.

ಆ ಹಾವನ್ನು ನೋಡಿದ ಕೂಡಲೇ ಪ್ರಸವ ನೋಡಿದ ಹೆಂಗಸರು, "ಛೀ ಛೀ ! ಇದನ್ನು ಅತ್ತ ಬಿಸುಟುಬಿಡಿ !" ಎಂದರು ಅಸಹ್ಯದಿಂದ. ಆದರೆ ಆ ಗೃಹಿಣಿ, ತನ್ನ ಕರುಳಿನ ಸ್ನೇಹದಿಂದ ಹಾಗೆ ಮಾಡದೆ, ಆ ಹಾವನ್ನು ಆಪ್ಯಾಯದಿಂದ ಹತ್ತಿರ ತೆಗೆದುಕೊಂಡು, ಶ್ರದ್ಧೆಯಿಂದ ಸ್ನಾನೋಪಚಾರ ಮಾಡಿಸಿ, ಶುದ್ಧವಾದೊಂದು ಹೊಸ ಮಡಿಕೆಯೊಳಗೆ ಅದನ್ನಿಡಿಸಿ, ದಿನಾ ಅದಕ್ಕೆ ಹಾಲೂ ಬೆಣ್ಣೆ ಕೊಡುತ್ತ ಪೋಷಿಸಿಕೊಂಡು ಬಂದಳು. ಯಾವ ಕೊರತೆಯೂ

ಹಿಂಬದಿಯ ಚಿತ್ರ ಕಥೆ

ಇಲ್ಲದೆ ಪುಷ್ಟಿಕರವಾದ ಈ ಆಹಾರದಿಂದ ಹಾವು ದಿನದಿಂದ ದಿನಕ್ಕೆ ವಿಪರೀತವಾಗಿ ಬೆಳೆದುಕೊಂಡಿತು. ಕೆಲವು ವರ್ಷಗಳು ಕಳೆದಮೇಲೆ, ಅವರ ನೆರೆಮನೆಯ ಹುಡುಗನಿಗೆ ಮದುವೆಯಾಯಿತು. ಅದನ್ನು ನೋಡಿ ಬ್ರಾಹ್ಮಣನ ಹೆಂಡತಿ ತನ್ನ ಗಂಡನೊಂದಿಗೆ, "ನಿಮಗೆ ನನ್ನ ಚಿಂತೆ ಏನೂ ಇಲ್ಲ. ನಮ್ಮ ಮಗನಿಗೂ ಪ್ರಾಯವಾಯಿತು. ಅವನಿಗೆ ಮದುವೆ ಮಾಡುವ ಆಲೋಚನೆಯೇ ನಿಮಗಿಲ್ಲವಲ್ಲ?" ಎಂದಳು ಕಣ್ಣೀರು ಒತ್ತಿಕೊಳ್ಳುತ್ತಾ.

ಬ್ರಾಹ್ಮಣನು ಅವಳನ್ನು ನೋಡಿ, "ಪ್ರಿಯಳೇ; ಹಾವಿಗೆ ಯಾರಾದರೂ ಹೆಣ್ಣು ಕೊಡುತ್ತಾರೆಯೆ? ಪಾತಾಳಕ್ಕೆ ಹೋಗಿ ನಾಗಕನ್ಯೆಯೊಬ್ಬಳನ್ನು ಕೊಡುವಂತೆ ವಾಸುಕಿಯೊಡನೆ ಪ್ರಾರ್ಥನೆ ಮಾಡಬೇಕು. ಅಷ್ಟೇ" ಎಂದನು.

ಅವನ ಮಾತು ಕೇಳಿ ಹೆಂಡತಿ ಹೃದಯವಿದಾರಕವಾಗಿ ಅಳತೊಡಗಿದಳು. ಆ ಬ್ರಾಹ್ಮಣನು ಹೆಂಡತಿಯ ಮೇಲಿನ ಪ್ರೀತಿಯಿಂದ, ಒಂದು ನಿರ್ಧಾರಕ್ಕೆ ಬಂದು, ದೊಡ್ಡದೊಂದು ಸಂಪತ್ತಿನ ಗಂಟು ಹೊತ್ತುಕೊಂಡು ನಾಗಕುಮಾರನಿಗೆ ವಧುವನ್ನು ಹುಡುಕುತ್ತಾ ಎಲ್ಲಿಗೋ ಹೊರಟನು.

ಅನೇಕ ತಿಂಗಳು ಪ್ರಯಾಣ ಮಾಡಿದ ಮೇಲೆ ಅವನು ಬಹು ದೂರದಲ್ಲಿದ್ದ ಕುಟ್ಟುಕಟವೆಂಬ ಗ್ರಾಮವನ್ನು ಸೇರಿ, ಅಲ್ಲಿದ್ದ ತನ್ನ ಮಿತ್ರನೂ ಬಂಧುವೂ ಆದ ಒಬ್ಬ ಸಂಪನ್ನನ ಮನೆಗೆ ಹೋದನು. ಅಲ್ಲಿ ಆದರಿಸಲ್ಪಟ್ಟು ಸ್ನಾನ ಭೋಜನಗಳನ್ನೆಲ್ಲ ಮುಗಿಸಿ, ಆ ರಾತ್ರಿ ಅಲ್ಲಿಯೇ ಮಲಗಿದನು. ಮರುದಿನ ಬೆಳಿಗ್ಗೆ ಅವನು ಮತ್ತೆ ಪ್ರಯಾಣಕ್ಕೆ ಸಿದ್ಧನಾಗಲು, ಅವನ ಮಿತ್ರನು, "ಇಲ್ಲಿಗೆ ಏನು ಕೆಲಸದ ಮೇಲೆ ಬಂದೆಯೆಂದು ಹೇಳಲೇ ಇಲ್ಲವಲ್ಲ? ಇಷ್ಟು ದೂರ ಯಾವ ಕೆಲಸದ ಮೇಲೆ ಹೊರಟಿರುವೆ?" ಎಂದು ಕೇಳಿದನು.

"ನನ್ನ ಮಗನಿಗೆ ವಧುವನ್ನು ಹುಡುಕುತ್ತಾ



ಹೊರಟಿದ್ದೇನೆ" ಎಂದ ಬ್ರಾಹ್ಮಣ. ಅದನ್ನು ಕೇಳಿ ಮಿತ್ರನು, "ಹಾಗಾದರೆ ಸುಂದರಿಯಾದ ನನ್ನ ಮಗಳನ್ನು ನೋಡಿಬಿಡು. ನೀನೂ ನಾನೂ ಒಂದೇ ಸ್ಥಿತಿಗತಿಯವರು. ಒಂದೇ ಕುಲದವರು. ಪರಿಚಿತರಾದವರು. ಸಂಬಂಧಿಗಳಾಗಿಬಿಡೋಣ" ಎಂದನು.

ಬ್ರಾಹ್ಮಣನು ಆ ಮಾತಿಗೆ ಸಂತೋಷವಾಗಿ ಒಪ್ಪಿ, ವಧುವನ್ನೂ, ಅವಳ ಜತೆಯಲ್ಲಿ ಅನೇಕ ದಾಸದಾಸಿಯರನ್ನೂ, ಸ್ತ್ರೀಧನವನ್ನೂ ತೆಗೆದುಕೊಂಡು ರಾಜಗೃಹಕ್ಕೆ ಹಿಂದಿರುಗಿ ಬಂದನು.

ಮದುಮಗಳಾಗಿ ಬಂದವಳ ಅಸಾಧಾರಣವಾದ ಅಂದಚೆಂದಗಳನ್ನು ನೋಡಿ, ಅಂಥವಳನ್ನು ಒಂದು ಹಾವಿನೊಂದಿಗೆ ಮದುವೆ ಮಾಡುವರೆಂದು ತಿಳಿದು ಜನರು ತಂಡೋಪತಂಡವಾಗಿ ಬಂದರು. ಹುಡುಗಿಯನ್ನು ನೋಡಿದ ಕೂಡಲೇ ಅವರ ಹೃದಯ ಕರಗಿ ಹೋಯಿತು. ಅವರೆಲ್ಲ ಆ ಹುಡುಗಿಯ ಕಡೆಯವರೊಂದಿಗೆ, "ಏನನ್ಯಾಯ! ಧರ್ಮ ಪ್ರಕಾರ

ನಡೆಯುವ ಸಜ್ಜನರೆಂದು ಹೇಳಿಕೊಳ್ಳುವವರು, ರತ್ನದಂತಹ ಈ ಹುಡುಗಿಯನ್ನು ಹಾಳು ಹಾವಿಗೆ ಕೊಟ್ಟು ಮದುವೆ ಮಾಡುವುದುಂಟೆ? ನಿಲ್ಲಿಸಿರಿ ಇದನ್ನು" ಎಂದರು.

ದಾಸದಾಸಿಯರು ಈ ದಾರುಣ ವಾರ್ತೆಯನ್ನು ವಧುವಿನೊಂದಿಗೆ ಹೇಳಿದರು. ಸುತ್ತಲೂ ಕೂಡಿದ ಜನರು ಆ ಹುಡುಗಿಯನ್ನು ಕುರಿತು ಸಂಕಟಪಡುತ್ತಿದ್ದರು. ಅವರಲ್ಲಿ ಹಿರಿಯರೂ ಬುದ್ಧಿವಂತರೂ ಆದವರು, "ನಾವೇ ಈ ಹುಡುಗಿಯನ್ನು ಬಲಾತ್ಕಾರವಾಗಿ ಬಿಡುಗಡೆ ಮಾಡಿಸಿ, ಎಲ್ಲೋ ಹಾಳು ಬಿಲದೊಳಗೆ ವಾಸ ಮಾಡುವ ಹಾವಿಗೆ ಹೆಂಡತಿಯಾಗದಂತೆ ಮಾಡೋಣ" ಎಂದು ಕೂಗಾಡಿದರು.

ಇದನ್ನೆಲ್ಲಾ ಕೇಳಿ ಆ ಹುಡುಗಿ, "ಇನ್ನು ಸಾಕು ಮಾಡಿರಿ ನಿಮ್ಮ ಗಲಾಟೆ. ರಾಜರು ತಾವು ಜ್ಯಾರೀ ಮಾಡಿದ ಆಜ್ಞೆಗಳನ್ನು ಉಪಸಂಹರಿಸಿಕೊಳ್ಳುವುದಿಲ್ಲ. ಒಳ್ಳೆಯವರು ತಾವು ಮಾಡಿದ ವಾಗ್ದಾನಗಳನ್ನು ಹಿಂದೆಗೆದುಕೊಳ್ಳುವುದಿಲ್ಲ. ಕನ್ಯೆಯನ್ನು ದಾನ ಮಾಡುವ ಪುಣ್ಯಕಾರ್ಯ ಜನ್ಮದಲ್ಲಿ ಒಂದೇ ಸಾರಿ ನಡೆಯುವುದೆಂದು ಹಿರಿಯರು ಹೇಳುತ್ತಾರೆ. ದೈವ ನಿರ್ಣಯದಂತೆ ನಡೆಯಬೇಕಾದ್ದು ನಡೆದು ತೀರುತ್ತದೆ. ವಿಧಿಯ ಬರೆಹ ತಪ್ಪದು. ಪುಷ್ಪಕ ಸಾಯುವುದನ್ನು ತಪ್ಪಿಸಲು ದೊಡ್ಡ ದೊಡ್ಡ ದೇವತೆಗಳಿಗೆ ಕೂಡಾ ಸಾಧ್ಯವಾಗಲಿಲ್ಲವಲ್ಲಾ? ನಾನೆಷ್ಟರವಳು?" ಎಂದಳು.

"ಅದೇನು ಕಥೆ? ಯಾರು ಆ ಪುಷ್ಪಕ?" ಎಂದು ಸುತ್ತಲೂ ಕೂಡಿದವರು ಕೇಳಲು, ಆ ವಧು ಅವರಿಗೆ ಆ ಕಥೆಯನ್ನು ಹೇಳಿದಳು:

## ಪುಷ್ಪಕದ ಕಥೆ

ಇಂದ್ರನ ಬಳಿಯಲ್ಲಿ ಅನೇಕ ಶಾಸ್ತ್ರ ಮತ್ತು ಅನೇಕ ವಿದ್ಯೆಗಳಲ್ಲಿ ಪ್ರಾವೀಣ್ಯತೆ ಪಡೆದ ಪುಷ್ಪಕವೆಂಬ ಸುಂದರವಾದ ಗಿಳಿ ಇದ್ದಿತು. ಒಂದುದಿನ ಅದು ಇಂದ್ರನ ಕೈಯಲ್ಲಿ ಕುಳಿತುಕೊಂಡು ಮಾತಾಡುತ್ತ, ಯಮನನ್ನು ನೋಡಿದ ಕೂಡಲೇ ಓಡಿಹೋಯಿತು. ಏಕೆ ಓಡಿದೆಯೆಂದು ದೇವತೆಗಳು ಪುಷ್ಪಕವನ್ನು ಕೇಳಿದರು. "ಎಲ್ಲಾ ಪ್ರಾಣಗಳನ್ನೂ ತೆಗೆಯುವವನನ್ನು ನೋಡಿ ಓಡಿಹೋಗದೆ ಮತ್ತೇನು ಮಾಡಲಿ?" ಎಂದಿತು ಪುಷ್ಪಕ.

ಅದನ್ನು ಕೇಳಿ ದೇವತೆಗಳು ಯಮನನ್ನು ನೋಡಿ, "ಪುಷ್ಪಕದ ಪ್ರಾಣ ತೆಗೆಯಬೇಡ" ಎಂದರು. ಅದಕ್ಕೆ ಯಮನು "ನಾನು ಕಾಲನ ಬಂಟ. ನೀವು ಹೋಗಿ ಕಾಲನನ್ನು ಕೇಳಿರಿ" ಎಂದ. ಅವರು ಕಾಲನನ್ನು ಕೇಳಿದಾಗ, ಮೃತ್ಯುವಿನ ಹತ್ತಿರ ಹೇಳಿರಿ ಎಂದ ಕಾಲ. ದೇವತೆಗಳು ಮೃತ್ಯುವಿನ ಹತ್ತಿರ ಹೇಳಿದರು. ಆದರೆ ಮೃತ್ಯುವನ್ನು ನೋಡಿದ ಕೂಡಲೇ ಪುಷ್ಪಕದ ಪ್ರಾಣ ಹಾರಿಹೋಯಿತು.





# ರಾಜಯೋಗ

ತನ್ನ ಹಟ ಹೆಚ್ಚೋ ಬೇತಾಳದ ಹಟ ಹೆಚ್ಚೋ ನೋಡಿಯೇ ತೀರುವೆನೆಂಬ ದೃಢ ನಿಶ್ಚಯದಿಂದ ರಾಜಾ ತ್ರಿವಿಕ್ರಮನು ಮತ್ತೆ ಮರದ ಬಳಿಗೆ ಹೋಗಿ, ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ, ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯ ತೊಡಗಿದನು. ಆಗ ಶವದೊಳಗಿನ ಬೇತಾಳವು ಮಾತಾಡಲು ತೊಡಗಿ, "ಎಲೈ ರಾಜನೇ, ವಿಧಿ ಬರೆದುದನ್ನು ತಪ್ಪಿಸಲು ಪ್ರಯತ್ನ ಮಾಡುವುದು ಎಷ್ಟರಮಟ್ಟಿಗೆ ನಿಷ್ಫಲವಾಗುವುದೋ, ಅದನ್ನು ನಿಜಗೊಳಿಸಲು ಮಾಡುವ ಪ್ರಯತ್ನ ಕೂಡಾ ಅಷ್ಟೇ ನಿರರ್ಥಕವೇ. ಇದಕ್ಕೆ ನಿದರ್ಶನವಾಗಿ ನಿನಗೊಂದು ಕಥೆ ಹೇಳುತ್ತೇನೆ. ನಿನ್ನ ಹಾಗೆ ಮಾನವ ಪ್ರಯತ್ನ ಮಾಡುವವರು ಇನ್ನೊಬ್ಬರಿಲ್ಲವೆಂಬುದು ನಿಜವೇ. ಶ್ರದ್ಧೆಯಿಂದ ಕೇಳುತ್ತಾ ನಡೆಯುವುದರಿಂದ ಶ್ರಮ ತಿಳಿಯಲಾರದು." ಎಂದು ಹೇಳಿ ಕಥೆಯನ್ನು ಪ್ರಾರಂಭ ಮಾಡಿತು :

ಪೂರ್ವದಲ್ಲಿ ಚಂದನಪುರ ರಾಜ್ಯವನ್ನು ನಂದನ ವರ್ಮನೆಂಬ ರಾಜನು ಪಾಲಿಸಿಕೊಂಡಿದ್ದನು. ಅವನಿಗೆ ಬಹಳ ಕಾಲ ಮಕ್ಕಳಿಲ್ಲದ ಮೇಲೆ, ಒಬ್ಬ ಮಗ

ಬೇತಾಳಕಥೆಗಳು?..



ಹುಟ್ಟಿದ. ರಾಜನು ತನ್ನ ಆಸ್ಥಾನದ ಜ್ಯೋತಿಷ್ಯನನ್ನು ಕರೆಯಿಸಿ, ತನ್ನ ಮಗನ ಜಾತಕಚಕ್ರ ಬರೆದು ಕೊಡುವಂತೆ ಅಪ್ಪಣೆ ಮಾಡಿದ.

ಜ್ಯೋತಿಷ್ಯನು ರಾಜಾಸ್ಥಾನದಿಂದ ತನ್ನ ಮನೆಗೆ ತಲಪಿದಾಗ, ಅತನ ಪತ್ನಿ ಕೂಡಾ ಒಬ್ಬ ಮಗನನ್ನು ಹಡೆದಿದ್ದಳು. ಜ್ಯೋತಿಷ್ಯನು ರಾಜನ ಮಗುವಿನ ಜಾತಕ ಬರೆಯುತ್ತಾ, ತನ್ನ ಮಗನ ಜಾತಕವನ್ನೂ ಬರೆಯುತೊಡಗಿದನು. ಆಮೇಲೆ ಎರಡು ಜಾತಕಗಳ ಫಲಗಳನ್ನು ಪರಿಶೀಲಿಸುತ್ತ ತುಂಬ ಆಶ್ಚರ್ಯಪಡ ತೊಡಗಿದನು. ಆಶ್ಚರ್ಯದೊಂದಿಗೆ ಸಂತೋಷವೂ ಕುತೂಹಲವೂ ಹೆಚ್ಚು ಹೆಚ್ಚಾಗಿ ಬೆಳೆಯ ತೊಡಗಿತು.

ಏಕೆಂದರೆ ತನ್ನ ಮಗನಿಗೆ ಇಪ್ಪತ್ತನೆಯ ವಯಸ್ಸಿನಲ್ಲಿ ರಾಜಯೋಗ ಬರಲಿದೆಯೆಂದು ಸ್ಪಷ್ಟವಾಗಿತ್ತು. ಅದೇ ವಯಸ್ಸಿನಲ್ಲಿ ರಾಜನ ಮಗನಿಗೆ ಎರಡು ಪ್ರಾಣಗಂಡಗಳು ಕಾಣುತ್ತಿದ್ದುವು. ಒಂದು ತಪ್ಪಿದರೆ ಇನ್ನೊಂದು. ಇದೆಂತಹ ವಿಧಿ ಬರೆಹವೋ? ಈ ದೇಶಕ್ಕೆ ಮುಂದಿನ ರಾಜನು ತನ್ನ ಮಗನೇನೋ? ಪ್ರಾರಂಭದಲ್ಲಿ ಜ್ಯೋತಿಷ್ಯನು ರಾಜನ ಹತ್ತಿರ ಇದ್ದ ವಿಷಯವನ್ನು ಇದ್ದಂತೆ ತಿಳಿಸಬೇಕೆಂದೇ ಮಾಡಿದನು. ಆದರೆ ಸ್ವಲ್ಪ ಆಲೋಚನೆ ಮಾಡಿದ ಮೇಲೆ ನಿಜ ಹೇಳುವುದು ಒಳ್ಳೆಯದಲ್ಲವೆನಿಸಿತು. ರಾಜನು ತನ್ನ ಮಗನಿಗೆ ಏನಾದರೂ ಕೇಡು ಮಾಡುವನೇನೋ ಎಂದು ಹೆದರಿದನು. ತನ್ನ ಮಗನಿಗಿರುವ ರಾಜಯೋಗಕ್ಕೂ, ಅದೇ ಸಮಯಕ್ಕೆ ರಾಜಕುಮಾರನಿಗೆ ಬರುವ ಪ್ರಾಣಗಂಡಕ್ಕೂ ಸಂಬಂಧವಿರಲೇ ಬೇಕು. ಈ ಸಮಾಚಾರ ತಿಳಿದ ರಾಜನು ಏನಾದರೂ ಗ್ರಹಶಾಂತಿ ಮಾಡಿಸಿ ದೋಷವನ್ನು ಹೋಗಲಾಡಿಸಬಹುದು; ಅಥವಾ ಇಪ್ಪತ್ತು ವರುಷ ಪ್ರಾಯ ಬರುವುದಕ್ಕೆ ಮೊದಲೇ ರಾಜಕುಮಾರನಿಗೆ ಪಟ್ಟಾಭಿಷೇಕ ಮಾಡಲೂಬಹುದು. ಏನೋ ರಾಜನ ಇಷ್ಟ ಹೀಗೇ ಎನ್ನಲು ಸಾಧ್ಯವಿಲ್ಲ.

ಜ್ಯೋತಿಷ್ಯನು ಹೀಗೆ ಆಲೋಚನೆ ಮಾಡಿ ರಾಜನೊಂದಿಗೆ ಸುಳ್ಳು ಹೇಳುವುದೇ ಒಳ್ಳೆಯದೆಂದುಕೊಂಡು, "ಮಹಾರಾಜರೆ, ಯುವರಾಜನ ಜಾತಕವು ಎಲ್ಲಾ ವಿಧದಲ್ಲಿಯೂ ಉತ್ತಮವಾಗಿದೆ. ಆದರೂ ಇಪ್ಪತ್ತನೇ ವಯಸ್ಸು ತುಂಬಿದ ಮೇಲೆಯೇ ಅವನಿಗೆ ಪಟ್ಟಾಭಿಷೇಕ ಮಾಡಿರಿ. ಅದಕ್ಕಿಂತ ಮೊದಲು ರಾಜ್ಯಾಭಿಷೇಕ ಮಾಡುವುದರಿಂದ ಕೆಲವು ಅನಿಷ್ಟಗಳುಂಟಾಗಲು ಸಾಧ್ಯವಿದೆ. ಆಮೇಲೆ ಮಾಡುವುದೇ ಸರ್ವೋತ್ತಮ" ಎಂದನು.

ರಾಜನ ಮಗನಿಗೆ ಆನಂದವರ್ಮನೆಂದು ಹೆಸರಿಟ್ಟರು. ಜ್ಯೋತಿಷ್ಯನ ಮಗನಿಗೆ ಸುಂದರಸೇನನೆಂದು ಹೆಸರಿಟ್ಟಿದ್ದರು. ಅನಂತರ ಇಬ್ಬರು ಕುಮಾರರೂ ಒಬ್ಬ ಗುರುವಿನ ಬಳಿಯಲ್ಲೇ ವಿದ್ಯಾಭ್ಯಾಸ ಮಾಡುತ್ತ ಬುದ್ಧಿವಂತರಾಗಿ ಬೆಳೆದು ದೊಡ್ಡವರಾದರು. ಇಬ್ಬರೂ ಸ್ವತಂತ್ರ ಆಲೋಚನೆಯುಳ್ಳ ಪ್ರೌಢರಾಗಿ ಇಪ್ಪತ್ತನೇ ವಯಸ್ಸಿಗೆ ಪ್ರವೇಶ ಮಾಡಿದರು.

ಒಂದು ದಿನ ಜ್ಯೋತಿಷ್ಯನ ಮಗನಾದ ಸುಂದರ ಸೇನನು ತನ್ನ ತಂದೆಯೊಂದಿಗೆ, "ನನಗೆ ಜ್ಯೋತಿಷ್ಯದಲ್ಲಿ ಇನ್ನೂ ಹೆಚ್ಚಿನ ಪಾಂಡಿತ್ಯ ಸಂಪಾದಿಸಬೇಕೆಂದಿದೆ. ಅದಕ್ಕಾಗಿ ನಾನು ಸ್ವಲ್ಪ ಕಾಲ ದೇಶಾಟನ ಮಾಡಿ ಬರುತ್ತೇನೆ" ಎಂದನು.

"ಹೋಗಿ ಬಾ. ಆದರೆ ನೀನು ಆರು ತಿಂಗಳೊಳಗೆ ತಿರುಗಿ ಬಂದುಬಿಡಬೇಕು. ಹಾಗಿದ್ದರೆ ಮಾತ್ರ ಹೋಗು. ಇಲ್ಲದಿದ್ದರೆ ಹೋಗಬೇಡ" ಎಂದ ತಂದೆ. ಸುಂದರಸೇನನು ತಂದೆಯ ಅಭಿಮತದಂತೆ ಹಿಂದಿರುಗಲು ಒಪ್ಪಿಕೊಂಡು, ದೇಶಾಟನೆ ಮಾಡಲು ಹೊರಟುಹೋದನು.

ಅನಂತರ ಆರು ತಿಂಗಳು ಯಾವ ವಿಶೇಷವೂ ಇಲ್ಲದೆ ಕಳೆದುಹೋಯಿತು. ತನ್ನ ಮಗ ಸುಂದರ ಸೇನನು ಇನ್ನೂ ಹಿಂದಿರುಗಿ ಬಾರದುದರಿಂದ ಜ್ಯೋತಿಷ್ಯನು ತನ್ನೊಳಗೇ ಕಳವಳಪಡತೊಡಗಿದನು. ಮತ್ತೆ ಐದು ತಿಂಗಳೂ ಜರುಗಿಹೋದುವು. ಆದರೂ ಸುಂದರಸೇನನು ಹಿಂದಿರುಗಿ ಬರಲಿಲ್ಲ. ಇಲ್ಲಿ ರಾಜ ಕುಮಾರ ಆನಂದವರ್ಮನಿಗೂ ಯಾವಗಂಡಾಂತರವೂ ಸಂಭವಿಸಲಿಲ್ಲ. ಅದರಮೇಲೆ ರಾಜನು ಇನ್ನೆರಡು ತಿಂಗಳಲ್ಲಿ ತನ್ನ ಕುಮಾರನಿಗೆ ಪಟ್ಟಾಭಿಷೇಕ ಮಾಡಲು ದಿನ ನಿಶ್ಚಯ ಮಾಡಿ, ಅದಕ್ಕೆ ಬೇಕಾದ ಸಿದ್ಧತೆಗಳಿಗೂ ಇಳಿದುಬಿಟ್ಟನು.

ಇದನ್ನೆಲ್ಲ ನೋಡಿ ಜ್ಯೋತಿಷ್ಯನಿಗೆ ಇನ್ನಷ್ಟು ಆಂದೋಳನೆಯಾಯಿತು. ತನ್ನ ಜ್ಯೋತಿಷ್ಯದ ಮೇಲೆ ಅವನಿಗೆ ಒಳ್ಳೆಯ ನಂಬುಗೆ. ಆನಂದವರ್ಮನು ಕೆಲವು ದಿನಗಳಲ್ಲಿ ಸಾಯಲೇಬೇಕು. ತನ್ನ ಮಗ ಸುಂದರ ಸೇನನು ರಾಜನಾಗಲೂ ಬೇಕು.

ತಾಳ್ಮೆ ಗೆಟ್ಟ ಆ ಜ್ಯೋತಿಷ್ಯನು ತನ್ನ ಜ್ಯೋತಿಷ್ಯವನ್ನು ನಿಜ ಮಾಡಲು ತಾನೇ ತಲೆ ಹಾಕಿಬಿಟ್ಟನು. ಅದಕ್ಕೊಂದು ಕ್ರೂರವಾದ ಆಲೋಚನೆಯೂ ಅವನ ಮನಸ್ಸಿಗೆ ಹೊಳೆಯಿತು.



ಯುವರಾಜನು ಸಾಯಂಕಾಲದ ವೇಳೆಯಲ್ಲಿ ಉದ್ಯಾನದಲ್ಲಿರುವ ಒಂದು ಮರದ ಬುಡದ ಕಟ್ಟೆಯ ಮೇಲೆ ಸ್ವಲ್ಪಹೊತ್ತು ಕುಳಿತುಕೊಳ್ಳುವನು. ಇದನ್ನು ನೋಡಿಟ್ಟುಕೊಂಡ ಜ್ಯೋತಿಷ್ಯನು ದೊಡ್ಡದೊಂದು ಕಲ್ಲಿಗೆ ಹಗ್ಗ ಕಟ್ಟಿ, ಅದನ್ನು ಕಟ್ಟೆಗೆ ನೇರಾಗಿ ಮರದ ಕೊಂಬೆಗೆ, ಎಲೆಗಳ ಮರೆಯಲ್ಲಿ ಕಾಣದಂತೆ ನೇತಾಡಿಸಿ, ಆ ಹಗ್ಗದ ಇನ್ನೊಂದು ಭಾಗವನ್ನು ದೂರದಲ್ಲಿದ್ದ ಇನ್ನೊಂದು ಮರಕ್ಕೆ ಕಟ್ಟಿಟ್ಟನು.

ಸಾಯಂಕಾಲದಲ್ಲಿ ಆನಂದವರ್ಮನು ಉದ್ಯಾನಕ್ಕೆ ಬಂದು ಎಂದಿನಂತೆ ಮರದ ಬುಡದ ಕಟ್ಟೆಯ ಮೇಲೆ ಕುಳಿತನು. ಅವನ ತಲೆಗೆ ನೇರಾಗಿಯೇ ಇರುವ ಕಲ್ಲಿನ ಗಂಧವೇ ಅವನಿಗೆ ತಿಳಿಯದು. ಅವನು ಕುಳಿತುದನ್ನು ನೋಡಿದ ಕೂಡಲೇ ಹೊಂಚು ಹಾಕಿಕೊಂಡಿದ್ದ ಜ್ಯೋತಿಷ್ಯನು ಹಗ್ಗದ ಎರಡನೇ ಕೊನೆಯನ್ನು ಬಿಚ್ಚಿ ದೂರ ಓಡಿಹೋದನು. ಅದೇ ಕ್ಷಣದಲ್ಲಿ ಏನಾಯಿತೆಂದರೆ, ಯುವರಾಜನು ಕಟ್ಟೆಯಿಂದೆದ್ದು



ಇದಿರಿನಲ್ಲಿ ಕಾಣಿಸಿದ ಸುಂದರವಾದೊಂದು ಹೂವನ್ನು ಆಘ್ರಾಣಿಸಲು ಹೋದನು. ಅವನು ಎದ್ದ ಮರುಕ್ಷಣ ದಲ್ಲೇ ಧಡೀರನೆ ದೊಡ್ಡ ಕಲ್ಲು ಕಟ್ಟೆಯಮೇಲೆ ಬಿತ್ತು.

ಆನಂದವರ್ಮ ಗಾಬರಿಯಾಗಿ ಹಿಂದಿರುಗಿ ನೋಡಿದನು. ಕಟ್ಟೆಯ ಮೇಲೆ ದೊಡ್ಡದೊಂದು ಕಲ್ಲು, ಹಗ್ಗದಿಂದ ಕಟ್ಟಲ್ಪಟ್ಟು ಮರದ ಮೇಲಿನಿಂದ ಬಿದ್ದಿದೆ. ಇದನ್ನೆಲ್ಲ ನೋಡಿದಾಗ ಮುಖ್ಯವಿಷಯ ಅವನಿಗೆ ತಿಳಿಯಿತು. ತನ್ನನ್ನು ಕೊಲೆ ಮಾಡಲು ಯಾರೋ ಪ್ರಯತ್ನಿಸಿದ್ದಾರೆ. ಅದು ಆಕಸ್ಮಾತ್ತಾಗಿ ವಿಫಲವಾಗಿದೆ. ಆದರೆ ಬುದ್ಧಿವಂತನಾದ ಆನಂದ ವರ್ಮ ತನಗೆ ತಿಳಿದ ಈ ವಿಷಯವನ್ನು ಯಾರಿಗೂ ಹೇಳಲಿಲ್ಲ. ಯಾವ ಗಡಿಬಿಡಿಯನ್ನೂ ತೋರಿಸಲಿಲ್ಲ.

ತನ್ನ ಪ್ರಯತ್ನ ವ್ಯರ್ಥವಾದುದನ್ನು ನೋಡಿ ಜ್ಯೋತಿಷ್ಕನ ಬುದ್ಧಿಗೆ ಮಂಕು ಕವಿಯಿತು. ಏನೋ ಒಂದು ಆವೇಶವೆದ್ದಿತು. ಆವನು ಆ ದಿನ ರಾತ್ರಿ ಒಂದು ಕತ್ತಿಯನ್ನು ತೆಗೆದುಕೊಂಡು ನೇರಾಗಿ ಯುವ ರಾಜನ ಶಯನಮಂದಿರಕ್ಕೆ ಹೋದನು. ಆ ಸಮಯ ದಲ್ಲಿ ಆಶ್ಚರ್ಯವೆಂಬಂತೆ ಕಾವಲುಗಾರರೆಲ್ಲಾ ಗಾಢ ನಿದ್ರೆಯಲ್ಲಿ ಬಿದ್ದಿದ್ದರು. ಅದು ತನ್ನ ಅದೃಷ್ಟವೆಂದು ಕೊಂಡು ಜ್ಯೋತಿಷ್ಕನು ಒಳಗೆ ಪ್ರವೇಶ ಮಾಡಿ, ನಿದ್ರೆ ಮಾಡಿಕೊಂಡಿದ್ದಂತೆ ಕಂಡ ರಾಜಕುಮಾರನನ್ನು ತಿವಿದು ಕೊಲ್ಲಲು ನೋಡಿದನು. ಅಷ್ಟರೊಳಗೆ ಆನಂದ ವರ್ಮನು ಚಟಕ್ಕನೆದ್ದು ಜ್ಯೋತಿಷ್ಕನ ಕತ್ತಿಯ ಕೈಯನ್ನು ಹಿಡಿದು ನಿಂತನು.

ಜ್ಯೋತಿಷ್ಕನ ಗುರುತು ಹಿಡಿದು ರಾಜಕುಮಾರನು ಆಶ್ಚರ್ಯದಿಂದ, "ನೀವೋ? ಈ ದಿನ ಸಾಯಂಕಾಲ ನನ್ನನ್ನು ಕೊಲ್ಲಲು ಪ್ರಯತ್ನಿಸಿದ್ದು ನೀವೇ ಎಂದಾಯಿತು. ಕೊಲೆಗಾರನನ್ನು ಕಂಡುಹಿಡಿಯ ಬೇಕೆಂತಲೇ, ನಾನೂ ನನ್ನ ಕಾವಲಿನವರೂ ಗಾಢ ನಿದ್ದೆಯಲ್ಲಿರುವಂತೆ ನಟಿಸಿದೆವು. ಹೌದು, ನನ್ನಮೇಲೆ ನಿಮಗೇಕೆ ಇಷ್ಟು ಹಗೆ? ನಾನೇನು ಮಾಡಿದ್ದೇನೆ ನಿಮಗೆ? ಯಾವುದನ್ನೂ ಮುಚ್ಚಿಡದೆ ಸ್ಪಷ್ಟವಾಗಿ ಹೇಳಿಬಿಡಿ" ಎಂದು ಕೇಳಿದ.

ಜ್ಯೋತಿಷ್ಕನು ಹೆದರಿ ಗಡಗಡ ನಡುಗುತ್ತ ಎಲ್ಲಾ ಸಂಗತಿಯನ್ನೂ ಹೇಳಿಬಿಟ್ಟನು. ಅದನ್ನು ಕೇಳಿ ಆನಂದ ವರ್ಮನು ನಗುತ್ತ, "ಒಳ್ಳೇ ಗಟ್ಟಿಗರಾದ ಜೋಯಿಸ ರಯ್ಯ! ನಿಮ್ಮ ಜ್ಯೋತಿಷ್ಯವನ್ನು ನೀವೇ ನಿಜ ಮಾಡಿದಿರಿ. ನನಗಿರುವ ಎರಡು ಪ್ರಾಣಗಂಡಗಳನ್ನೂ ನೀವೇ ಉಂಟುಮಾಡಿದಿರಿ. ನಿಮ್ಮ ಜ್ಯೋತಿಷ್ಯ ನಿಜವೇ ಅನ್ನಿ. ಆದರೆ ನಿಮ್ಮ ಮಗ ಈ ರಾಜ್ಯಕ್ಕೇ ರಾಜನಾಗಬೇಕೆಂದು ನೀವೇಕೆ ಅಂದುಕೊಂಡಿರಿ? ಬೇರೆ ಯಾವುದೋ ಒಂದು ರಾಜ್ಯಕ್ಕೆ ರಾಜನಾಗ ಬಾರದೇನು? ಈ ಭೂಮಿಯಲ್ಲಿ ಬೇರೆ ಎಷ್ಟೋ ರಾಜ್ಯಗಳಿಲ್ಲವೆ?" ಎಂದನು.

ರಾಜಕುಮಾರನು ಹೇಳಿದಂತೆಯೇ ನಡೆದಿತ್ತು. ದೇಶಾಟನೆಗೆ ಹೋಗಿದ್ದ ಸುಂದರಸೇನನು, ಒಂದು ದೇಶದ ರಾಜನನ್ನು ರಾಜದ್ರೋಹಿಗಳ ದುಸ್ತಂತ್ರ

ದಿಂದ ಕಾಪಾಡಿದ್ದನು. ಆ ರಾಜನು ಬಹಳ ವೃದ್ಧನಾಗಿದ್ದು, ಮಕ್ಕಳಿಲ್ಲದವನು. ತನ್ನ ಪ್ರಾಣವುಳಿಸಿದ ಸುಂದರಸೇನನನ್ನೇ ಮಗನನ್ನಾಗಿ ಸ್ವೀಕರಿಸಿ, ಅವನನ್ನೇ ತನ್ನ ದೇಶಕ್ಕೆ ರಾಜನನ್ನಾಗಿಯೂ ಪಟ್ಟಾಭಿಷೇಕ ಮಾಡಿದನು. ಈ ವಾರ್ತೆ ಬೇಗನೇ ಚಂದನಪುರಕ್ಕೂ ತಲಪಿತು. ಸುಂದರಸೇನನು ತಂದೆಗೆ ಮಾತು ಕೊಟ್ಟ ಪ್ರಕಾರ ಆರು ತಿಂಗಳಿನಲ್ಲಿ ಬಾರದೆ ಹೋಗಲು ಅವನು ಅಲ್ಲಿಯ ರಾಜಕೀಯದಲ್ಲಿ ಸಿಕ್ಕಿಕೊಂಡುದೇ ಕಾರಣವಾಗಿತ್ತು.

ಆನಂದವರ್ಮನು ಜ್ಯೋತಿಷ್ಕನ ಮೇಲೆ ಮತ್ತೇನೂ ವಿಚಾರಣೆ ನಡೆಸಲಿಲ್ಲ. ಅವನನ್ನು ತನ್ನ ಆಸ್ಥಾನದಲ್ಲೇ ಎಂದಿನಂತೆ ಇರಲಿಕ್ಕೂ ಹೇಳಿದನು. ಆದರೆ ಜ್ಯೋತಿಷ್ಕನಿಗೆ ಅಲ್ಲಿರಲು ಮುಖವಿಲ್ಲದೆ, ತನ್ನ ಮಗನು ಪಾಲಿಸುವ ರಾಜ್ಯಕ್ಕೇ ಹೋಗಿ ಅಲ್ಲಿಯೇ ತಳವೂರಿಬಿಟ್ಟನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜನೇ, ತನ್ನನ್ನು ಕೊಲ್ಲಲು ಎರಡುಸಾರಿ ಪ್ರಯತ್ನಿಸಿದ ಜ್ಯೋತಿಷ್ಕನನ್ನು ಆನಂದವರ್ಮನು ಏತಕ್ಕಾಗಿ ಕ್ಷಮಿಸಿದ? ದೈವಚಿತ್ತದಂತೆ ಮನುಷ್ಯರ ಪ್ರಯತ್ನವಿರುತ್ತದೆಂದು ಹೇಳುವುದುಂಟು. ಹಾಗಾದರೆ ಜ್ಯೋತಿಷ್ಕನ ಪ್ರಯತ್ನವು ಏಕೆ ವಿಫಲವಾಯಿತು? ಅವನು ತಪ್ಪಾಗಿ ಪ್ರಯತ್ನಿಸಿದರೂ ದೈವಚಿತ್ತದಂತೆಯೇ ನಡೆದುದರಿಂದ ಮಾನವರ ಪ್ರಯತ್ನವು ವ್ಯರ್ಥವೆಂದು ತಿಳಿಯಬೇಕೆ? ಈ ಸಂದೇಹಗಳಿಗೆ ತಕ್ಕ ಸಮಾಧಾನ ತಿಳಿದರೂ ಹೇಳದೆ ಹೋದರೆ ನಿನ್ನ ತಲೆಯೊಡೆದು ಚೂರುಚೂರಾಗುತ್ತದೆ" ಎಂದಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ಜ್ಯೋತಿಷ್ಕನು ಹೇಳಿದ ಜೋಸ್ಯ ಅಮೋಘವಾದುದೆಂದು ತಿಳಿದುದರಿಂದ ಆನಂದವರ್ಮನು ಅವನನ್ನು ಕ್ಷಮಿಸಿ ತನ್ನ ಆಸ್ಥಾನದಲ್ಲಿ ಇಟ್ಟುಕೊಳ್ಳಬೇಕೆಂದಿದ್ದನು. ಜ್ಯೋತಿಷ್ಕನು ಜಾತಕದ ಅರ್ಥವನ್ನು ವಿಪರೀತವಾಗಿ ಕಲ್ಪಿಸಿಕೊಂಡನೇ ಹೊರತು, ಆನಂದವರ್ಮನ ಮೇಲೆ ಅವನಿಗೆ ವ್ಯಕ್ತಿಗತ ದ್ವೇಷವೇನಿಲ್ಲ. ಅದೂ ಅಲ್ಲದೆ ಅವನ ಕೊಲೆಯ ಪ್ರಯತ್ನಗಳೂ ನಿಷ್ಫಲವಾಗಿ ಅವನೇ ಸಿಕ್ಕಿಬಿದ್ದ. ಇದನ್ನೆಲ್ಲ ಗ್ರಹಿಸಿಯೇ ಆನಂದವರ್ಮನು ಅವನನ್ನು ಕ್ಷಮಿಸಿದನು. ಅವನು ತುಂಬ ಆತ್ಮ ನಿಗ್ರಹಶಕ್ತಿಯುಳ್ಳ ರಾಜಕುಮಾರನೇ ಸರಿ. ಜ್ಯೋತಿಷ್ಕನ ಪ್ರಯತ್ನವು ತಪ್ಪಾದ ಅರ್ಥದಿಂದ ನಡೆದರೂ ವ್ಯರ್ಥವಾಗಿ ಹೋಗಲಿಲ್ಲ. ಅವನೇ ಕಷ್ಟಪಟ್ಟು ಆನಂದವರ್ಮನ ಜಾತಕದಲ್ಲಿರುವ ಗಂಡಾಂತರಗಳನ್ನುಂಟು ಮಾಡಿದ್ದ."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡತೊಡಗಿತು.



# ಮಂತ್ರಿಯ ಚಮತ್ಕಾರ

ಹಿಂದೆ ಒಬ್ಬಾನೊಬ್ಬ ಮೂರ್ಖ ರಾಜನಿದ್ದ. ಅವನ ಮಂತ್ರಿ ತುಂಬ ಬುದ್ಧಿವಂತ. ಆ ರಾಜ್ಯದಲ್ಲಿ ಒಂದು ಸಾರಿ ತೀವ್ರವಾದ ಬರಗಾಲ ಬಂದಿತು. ಹಸಿವೆಯಿಂದ ಪ್ರಜೆಗಳು ಗುಂಪುಗುಂಪಾಗಿ ಸಾಯ ತೊಡಗಿದರು. ಎಲ್ಲರೂ ರಾಜನಬಳಿಗೆ ಬಂದು, ಧಾನ್ಯಾಗಾರದ ಧಾನ್ಯಗಳನ್ನು ಸಾಲವಾಗಿಯಾದರೂ ಕೊಡಬೇಕೆಂದು ಬೇಡ ತೊಡಗಿದರು. ಮಂತ್ರಿ ಕೂಡಾ ರಾಜನಿಗೆ ಅದೇ ಸಲಹೆ ಮಾಡಿದನು.

ಮೂರ್ಖನಾದ ರಾಜನು ಅದಕ್ಕೆ ಒಪ್ಪಲಿಲ್ಲ. ಇನ್ನು ಪ್ರಜೆಗಳು ತನ್ನ ಧಾನ್ಯಾಗಾರವನ್ನು ಕೊಳ್ಳೆ ಹೊಡೆಯುವರೆಂದುಕೊಂಡು ರಾಜನು ಮಂತ್ರಿಯೊಂದಿಗೆ, "ನಮ್ಮ ಧಾನ್ಯಗಳನ್ನೆಲ್ಲ ದ್ವೀಪಾಂತರಗಳಿಗೆ ಕಳುಹಿಸಿ ಮಾರಿಸಿಬಿಡಿ" ಎಂದು ಅಪ್ಪಣೆ ಮಾಡಿದರು.

ಮಂತ್ರಿ ಕೂಡಲೇ ರಾಜನ ಧಾನ್ಯಾಗಾರದ ಧಾನ್ಯಗಳನ್ನೆಲ್ಲಾ ಸಮುದ್ರ ತೀರಕ್ಕೆ ಕಳುಹಿಸಿ, ಸ್ವಲ್ಪ ದಿನಗಳ ಮೇಲೆ ರಾಜನೊಂದಿಗೆ, "ಮಹಾರಾಜರೇ, ನಮ್ಮ ಧಾನ್ಯದ ನೌಕೆಗಳು ಸಮುದ್ರದಲ್ಲಿ ಮುಳುಗಿ ಹೋದುವು" ಎಂದನು.

"ಏನು ಮಾಡಲಾದೀತು ? ಧಾನ್ಯಕ್ಕಾಗಿ ಕೂಗುವ ಪ್ರಜೆಗಳು ಸಮುದ್ರದಲ್ಲಿ ಸೇರಿದ ಧಾನ್ಯಗಳನ್ನು ತೆಗೆದು ಉಪಯೋಗಿಸಿಕೊಳ್ಳಲು ಹೇಳಿಬಿಡಿ" ಎಂದನು.

ಆ ಮೇಲೆ ಸಮುದ್ರತೀರದಲ್ಲಿ ಅಡಗಿಸಿಟ್ಟ ಧಾನ್ಯಗಳನ್ನು ಮಂತ್ರಿ ಪ್ರಜೆಗಳಿಗೆ ಹಂಚಿ ಕೊಟ್ಟುಬಿಟ್ಟನು.

ಪ್ರಜೆಗಳು ಮಂತ್ರಿಯ ಚಮತ್ಕಾರವನ್ನು ಕೊಂಡಾಡಿದರು.





# ಪ್ರಯೋಜಕತೆ

ಹಿಂದೆ ಒಂದು ಊರಿನಲ್ಲಿ ಒಬ್ಬಳು ಎರಡು ಮಕ್ಕಳಿಗೆ ತಾಯಿಯಾಗಿ, ಗಂಡನನ್ನು ಕಳೆದುಕೊಂಡು ಕಷ್ಟಕ್ಕೆ ಬಿದ್ದಳು. ಸ್ವಲ್ಪ ಕಾಲ ಕಳೆಯುತ್ತಿರಲು ಮಕ್ಕಳು ಇನ್ನೂ ಚಿಕ್ಕವರಾಗಿರುವಾಗಲೇ ತಾಯಿಯೂ ಹಾಸಿಗೆ ಹಿಡಿದಳು. ಅವಳ ಪರಿಸ್ಥಿತಿ ದಿನೇ ದಿನೇ ಕೆಡುತ್ತಾ ಹೋಗಲು, ಅವಳನ್ನು ನೋಡಲು ಅವಳ ಅಣ್ಣ ಸೋಮಯ್ಯ ಬಂದ. ಆಮೇಲೆ ಅವಳು ತನ್ನ ಮಕ್ಕಳ ಭಾರವನ್ನು ಸೋಮಯ್ಯನ ಮೇಲೆ ಬಿಟ್ಟುಕೊಟ್ಟು ಸತ್ತುಹೋದಳು.

ಸೋಮಯ್ಯ ಆ ಎರಡು ಮಕ್ಕಳನ್ನೂ ತನ್ನೊಂದಿಗೆ ಕರೆದುಕೊಂಡುಹೋಗಿ ತನ್ನ ಮನೆಯಲ್ಲಿಟ್ಟುಕೊಂಡು ಪ್ರೀತಿಯಿಂದ ಬೆಳಸಿದ. ದೊಡ್ಡವರಾಗುತ್ತಾ ಬಂದಂತೆ ಆ ಇಬ್ಬರು ಹುಡುಗರೂ ಯಾವುದರಲ್ಲಿಯೂ ಆಸಕ್ತಿಯುಳ್ಳವರಾಗಲಿಲ್ಲ. ಇಂತಹ ಮಕ್ಕಳು ಹೇಗೆತಾನೇ ಬದುಕಿ ಬಾಳುವರೋ ಎಂದು ಸೋಮಯ್ಯನಿಗೆ ಗೊತ್ತಾಗಲಿಲ್ಲ.

ಸೋಮಯ್ಯನಿಗೆ ಮೀನಾಕ್ಷಿ ಎಂಬ ಮಗಳಿದ್ದಳು. ಅವಳು ಚುರುಕಾದ ಸುಂದರ ಹುಡುಗಿ. ಆ ಹುಡುಗಿಯನ್ನೆ ಮದುವೆ ಮಾಡಿಕೊಳ್ಳಬೇಕೆಂಬು ಅಣ್ಣ ತಮ್ಮಂದಿರಾದ ಇಬ್ಬರಿಗೂ ಆಸೆಯಿದ್ದಿತು. ಅವರಿಬ್ಬರೂ ತಮ್ಮ ಆಸೆಯನ್ನು ಒಂದು ದಿನ ಸೋಮಯ್ಯನೊಂದಿಗೆ ಹೇಳಿದರು.

ಅದನ್ನು ತಿಳಿದು ಸೋಮಯ್ಯ ಅವರನ್ನು ಕುರಿತು, “ನಿಮಗೆ ಏನಿದೆಯೆಂದು ನನ್ನ ಮಗಳನ್ನು ಕೊಡಲಿ ? ನಿಮಗಿಬ್ಬರಿಗೂ ಯಾವ ವಿಧವಾದ ಸಾಮರ್ಥ್ಯವೂ ಇಲ್ಲ. ಮೀನಾಕ್ಷಿಯನ್ನು ನಿಮ್ಮೊಳಗೆ ಒಬ್ಬನಿಗೆ ಕೊಟ್ಟರೂ ಅವಳ ಕುತ್ತಿಗೆಯನ್ನು ಕೊಯ್ದಂತೆಯೇ ಆಗುತ್ತದೆ. ಆದರೂ ಅವಳ ಮದುವೆಗೆ ಅವಸರವೇನೂ ಇಲ್ಲ. ನಿಮಗೆ ನಾಲ್ಕು ವರ್ಷ ಗಡು ಕೊಡುತ್ತೇನೆ. ಅಷ್ಟರೊಳಗೆ ನೀವು ಪ್ರಯೋಜಕರಾಗಿ ತಿರುಗಿ ಬನ್ನಿ. ನಿಮ್ಮಿಬ್ಬರಲ್ಲಿ ಯಾರು ಪ್ರಯೋಜಕನೆಂದು ಕಾಣುವನೋ ಅವನಿಗೆ ಮೀನಾಕ್ಷಿಯನ್ನು ಕೊಟ್ಟು ಮದುವೆ ಮಾಡುತ್ತೇನೆ.” ಎಂದನು.

ಸೋಮಯ್ಯ ಮಾವನ ಮಾತು ಕೇಳಿ ಅಣ್ಣ ತಮ್ಮಂದಿರಿಬ್ಬರೂ ಪ್ರಯೋಜಕತೆಯನ್ನು ಸಾಧಿಸಿಕೊಂಡು ಬರಲು ಬೇರೆಬೇರೆ ದಿಕ್ಕಿಗೆ ಹೊರಟರು.

ಹಿರಿಯವನಾದ ರಾಮಪ್ಪ ಅನೇಕ ದೇಶಗಳನ್ನು ತಿರುಗಿ, ಕಡೆಗೆ ವಿದ್ಯಾಪುರವೆಂಬ ಊರನ್ನು ತಲುಪಿ

ಜಿ. ಶಿವಕುಮಾರ



ದನು. ಅವನು ಅಲ್ಲಿಯ ದೇವಾಲಯವನ್ನು ಮುಟ್ಟು ವಾಗ, ಅಲ್ಲಿ ಪುರಾಣ ಪಠಣ ನಡೆಯುತ್ತಿತ್ತು. ಪುರಾಣಿಕನಾದ ಬ್ರಾಹ್ಮಣನು ಎತ್ತರವಾದ ವೇದಿಕೆ ಯಲ್ಲಿ ಕುಳಿತು, ಶ್ಲೋಕಗಳನ್ನು ಓದುತ್ತ, ಅದರ ಅರ್ಥಗಳನ್ನು ಹೇಳುತ್ತಿದ್ದ. ಅವನ ಸುತ್ತಲೂ ನೂರಾರು ಜನರು ಕುಳಿತುಕೊಂಡು ಶ್ರದ್ಧೆಯಿಂದ ಕಿವಿಕೊಟ್ಟು ಕೇಳುತ್ತಿದ್ದರು. ರಾಮಪ್ಪನೂ ಗುಂಪಿನಲ್ಲಿ ಕುಳಿತು ಕೊನೆಯವರೆಗೂ ಪುರಾಣ ಕೇಳಿದ.

ತಕ್ಕ ವೇಳೆಗೆ ಪುರಾಣ ಮುಗಿದು, ಎಲ್ಲರೂ ಹೊರಟು ಹೋಗಿಬಿಟ್ಟರು. ರಾಮಪ್ಪನು ಪುರಾಣಿಕನ ಹಿಂದೆಯೇ ಆತನ ಮನೆಯವರೆಗೂ ಹೋದ. ಆ ಮೇಲೆ ರಾಮಪ್ಪ ಪುರಾಣಿಕನಿಗೆ ಸಾಷ್ಟಾಂಗನಮಸ್ಕಾರ ಮಾಡಿ, ತನ್ನನ್ನು ಶಿಷ್ಯನನ್ನಾಗಿ ಸ್ವೀಕರಿಸಿ ತನಗೆ ವಿದ್ಯೆ ಯನ್ನು ಕಲಿಸಿಕೊಡಬೇಕೆಂದು ಬೇಡಿದ.

ಬ್ರಾಹ್ಮಣನು ರಾಮಪ್ಪನನ್ನು ಎಬ್ಬಿಸಿ, "ನಿನಗೆ ಓದಿಕೊಳ್ಳಬೇಕೆಂದು ಆಸಕ್ತಿಯಿದ್ದರೆ, ನಿನಗೆ ಕಲಿಸಿ ಕೊಡಬಹುದು. ಇಲ್ಲಿಯೇ ಇರಪ್ಪ" ಎಂದನು. ಅಂದಿನಿಂದ ರಾಮಪ್ಪ ಗುರು ಶುಶ್ರೂಷೆ ಮಾಡುತ್ತ, ನಿಜವಾದ ಆಸಕ್ತಿಯಿಂದ ಮನಸ್ಸನ್ನಿಟ್ಟು ವಿದ್ಯಾಭ್ಯಾಸ ಮಾಡಿ, ಕಾಲಕ್ರಮದಲ್ಲಿ ಪಂಡಿತನಾದನು.

ಅವನ ತಮ್ಮ ರಂಗಪ್ಪ ಕೂಡಾ ಅನೇಕ ಊರುಗಳನ್ನು ತಿರುಗಾಡಿ, ಕಡೆಗೆ ರಾಮಪುರವೆಂಬ ಊರಿನ ಸತ್ರದ ಜಗಲಿಯ ಮೇಲೆ ಕುಳಿತುಕೊಂಡ. ಅಷ್ಟರಲ್ಲಿ ದೊಡ್ಡ ಮನುಷ್ಯನೊಬ್ಬ ಆ ಸತ್ರದ ಮುಂದಿನಿಂದಾಗಿ ನಡೆದು ಬರುತ್ತಿದ್ದ. ಅವನನ್ನು ನೋಡಿದ ಕೂಡಲೇ ಸತ್ರದ ಯಜಮಾನನೂ ಉಳಿದವರೂ ಎದ್ದು ಕೈ ಮುಗಿದು ವಿನಯಭಾವದಲ್ಲಿ ನಿಂತರು. ಆ ದೊಡ್ಡ ಮನುಷ್ಯ ಎಲ್ಲರನ್ನೂ ನೋಡಿಯೂ ನೋಡದವನಂತೆ ಗರ್ವದಿಂದ ಮುಂದೆ ಸಾಗಿಹೋದ.

ರಂಗಪ್ಪನಿಗೆ ಇದೇನೂ ಅರ್ಥವಾಗಲಿಲ್ಲ. ಅವನು ಸತ್ರದ ಯಜಮಾನನೊಂದಿಗೆ, "ಆ ದೊಡ್ಡ ಮನುಷ್ಯರು ಯಾರೋ ?" ಎಂದು ಕೇಳಿದ.

"ಅವರು ಈ ಊರಿನೊಳಗೆಲ್ಲಾ ಭಾರೀ ಧನವಂತರು. ಮೂವತ್ತು ತಲೆಮಾರಿನವರೆಗೆ ಕುಳಿತು ತಿಂದರೂ ಸವೆಯದಷ್ಟು ಹಣ ಅವರ ಕೈಯಲ್ಲಿದೆ. ಆದುದರಿಂದ ಅವರ ಮುಂದೆ ಎಲ್ಲರೂ ಗೌರವ ಕೊಟ್ಟು, ವಿನಯದಿಂದ ಮರ್ಯಾದೆಯಾಗಿರುತ್ತಾರೆ." ಎಂದ ಸತ್ರದ ಯಜಮಾನ.

ಈಗ ರಂಗಪ್ಪನಿಗೆ ಹಣದ ಮಹತ್ವ ಏನೆಂಬುದು ಅರ್ಥವಾಯಿತು. ಆ ಧನಿಕರ ಹತ್ತಿರ ಕೆಲಸಕ್ಕೆ ಸೇರಿಕೊಂಡು, ಬದುಕುವ ದಾರಿಯನ್ನು ತಿಳಿದುಕೊಳ್ಳಬಹುದು. ಅದರೊಂದಿಗೆ ಧನ ಸಂಪಾದನೆ ಮಾಡುವ ಅಸಲು ಸೂತ್ರಗಳನ್ನೂ ಅರಿತುಕೊಳ್ಳಬಹುದು.

ಹೀಗೆಂದುಕೊಂಡು ರಂಗಪ್ಪ ಆ ಧನವಂತನ ಹಿಂದೆಯೇ ಹೋಗಿ, ಅವನ ಮನೆಯ ಕಾರ್ಯಸ್ಥನನ್ನು ಕಂಡನು. ಅವನೊಡನೆ ಒಳ್ಳೆಯ ರೀತಿಯಲ್ಲಿ ಮಾತಾಡಿ, ತನಗೊಂದು ಕೆಲಸ ಕೊಡಿಸಬೇಕೆಂದು

ಪ್ರಾರ್ಥಿಸಿದನು. ಕಾರ್ಯಸ್ಥನು ರಂಗಪ್ಪನನ್ನು ಕೆಲಸಕ್ಕಿಟ್ಟುಕೊಳ್ಳಬಹುದೆಂದು ಆ ಧನಿಕನೊಂದಿಗೆ ಶಿಫಾರಸು ಮಾಡಿದನು. ಹೀಗೆ ರಂಗಪ್ಪ ಆ ಧನಿಕನ ಮನೆಯಲ್ಲಿ ಕೆಲಸಕ್ಕೆ ಸೇರಿದ.

ಒಂದು ತಿಂಗಳು ಆ ಧನಿಕನ ಮನೆಯಲ್ಲಿ ಸೇವಕನಾಗಿರುವಷ್ಟರಲ್ಲಿ ರಂಗಪ್ಪನಿಗೆ ಒಂದು ವಿಷಯ ಗೊತ್ತಾಯಿತು. ಅಲ್ಲಿ ತನಗೆ ಸಿಗುವ ಸಂಬಳದಲ್ಲಿ ಒಂದು ಚಿಕ್ಕಾಸು ಕೂಡ ಉಳಿಸಲು ತನಗೆ ಸಾಧ್ಯವಿಲ್ಲವೆಂದು ಅವನಿಗೆ ತಿಳಿಯಿತು. ಏಕೆಂದರೆ ಅಷ್ಟು ದೊಡ್ಡ ಧನಿಕನು ಹಣದ ವಿಷಯದಲ್ಲಿ ಪರಮ ಲೋಭಿಯಾಗಿದ್ದ. ಅದರ ಮೇಲೆ ಆ ಧನಿಕ ಹಣವನ್ನು ಸಂಪಾದಿಸಲು ಎಂತಹ ಮೋಸವನ್ನಾದರೂ ಮಾಡಬಲ್ಲನೆಂದು ಉಳಿದ ಸೇವಕರು ಕೂಡಾ ರಂಗಪ್ಪನೊಂದಿಗೆ ಹೇಳಿದರು.

ರಂಗಪ್ಪನಿಗೆ ತಾನು ಪ್ರಯೋಜಕನಾಗಲು ಏನು ಮಾಡಬೇಕೆಂದು ಚಿಂತೆ ಹಿಡಿಯಿತು. ಸೋಮಯ್ಯ ಮಾವ ಇರಿಸಿದ ಗಡುವಿನ ದಿನ ಸಮೀಪಿಸುತ್ತ ಇದೆ. ತಾನೇನೂ ಸಾಧಿಸಿಕೊಳ್ಳಲಿಲ್ಲವಲ್ಲಾ ಎಂದು ಅವನು ತಳಮಳಿಸತೊಡಗಿದ. ಹೀಗಿರುವಾಗ ಒಂದು ದಿನ ರಾತ್ರಿ ಆ ಧನಿಕನ ಭವನದಲ್ಲಿ ಎಲ್ಲರೂ ನಿದ್ದೆಮಾಡಿಕೊಂಡಿರುವಾಗ, ರಂಗಪ್ಪನಿಗೆ ಮಾತ್ರ ನಿದ್ದೆ ಬರಲಿಲ್ಲ. ಏನೋ ಶಬ್ದ ಕೇಳಿ, ಸದ್ದುಮಾಡದೆ ಆಕಡೆಗೆ ಹೋದ. ಯಾವುದಕ್ಕೂ ಒಳ್ಳೆಯದೆಂದುಕೊಂಡು ಕೈಯಲ್ಲೊಂದು ಬಲವಾದ ದೊಣ್ಣೆಯನ್ನೂ ಎತ್ತಿಕೊಂಡ.

ಇಬ್ಬರು ಕಳ್ಳರು ಗೋಡೆಗೆ ಕನ್ನ ಕೊರೆದು ಒಳಗೆ ಪ್ರವೇಶಿಸಿ, ಧನಿಕನ ಮನೆಯೊಳಗಿನಿಂದ ಹೇರಳವಾಗಿ ನಗನಾಣ್ಯಗಳನ್ನು ಕದ್ದು ಗಂಟು ಕಟ್ಟಿ ಕನ್ನದಿಂದ ಹೊರಗೆ ಬಂದು ಓಡಿಹೋಗಲು ಸಿದ್ಧರಾಗಿದ್ದರು. ಆಗಲೇ · ರಂಗಪ್ಪ ಅವರಿಗೆ ಅಡ್ಡವಾಗಿ ದೊಣ್ಣೆಯೊಂದಿಗೆ ಪ್ರತ್ಯಕ್ಷನಾಗಿದ್ದ.

ರಂಗಪ್ಪನ ಬಲಿಷ್ಠ ದೇಹವನ್ನೂ ದೊಣ್ಣೆಯನ್ನೂ ನೋಡಿ ಕಳ್ಳರು ಹೆದರಿದರು. ಅಷ್ಟರಲ್ಲಿ ದೊಣ್ಣೆ ಎತ್ತಿದ ರಂಗಪ್ಪನನ್ನು ನೋಡಿ ಒಬ್ಬ ಕಳ್ಳ ನಡುಗುತ್ತ, "ನಮ್ಮನ್ನು ಹೊಡೆಯಬೇಡ. ನಿನ್ನ ದಮ್ಮಯ್ಯ!



ಕದ್ದುಕೊಂಡದ್ದರಲ್ಲಿ ನಿನಗೆ ಅರ್ಧ ಭಾಗ ಕೊಡುತ್ತೇವೆ. ನಮ್ಮನ್ನು ಜೀವದೊಂದಿಗೆ ಬಿಡಪ್ಪ!" ಎಂದ.

ರಂಗಪ್ಪನು ತುಸು ಮೆತ್ತಗಾಗಿ ಒಂದು ಕ್ಷಣ ಆಲೋಚನೆ ಮಾಡಿದ. ಕಳವಿನ ಸೊತ್ತಿನಲ್ಲಿ ಭಾಗ ತೆಗೆದುಕೊಳ್ಳುವುದು ತಪ್ಪೇನೋ ಎನಿಸಿತು. ಆದರೆ ಈ ಧನವನ್ನು ಸಂಪಾದಿಸಲು ತನ್ನ ಯಜಮಾನ ಎಂತೆಂತಹ ಮೋಸಗಳನ್ನು ಮಾಡಿದ್ದನೋ? ಈ ಯೋಚನೆ ಬರುತ್ತಲೇ ಅವನು ಕಳ್ಳರು ಹೇಳಿದ ಮಾತಿಗೆ ಒಪ್ಪಿದ.

ಕಳ್ಳರು ತಾವು ದೋಚಿಕೊಂಡುದರಲ್ಲಿ ಅರ್ಧ ಭಾಗವನ್ನು ರಂಗಪ್ಪನಿಗೆ ಕೊಟ್ಟು ಹೊರಟು ಹೋದರು. ರಂಗಪ್ಪನು ತನಗೆ ಸಿಕ್ಕಿದ ಧನವನ್ನು ಭದ್ರವಾಗಿ ಅಡಗಿಸಿಟ್ಟನು.

ಮಾರಣೇದಿನ ಧನಿಕನು ತನ್ನ ಮನೆಯಲ್ಲಿ ಕಳುವಾದುದನ್ನು ತಿಳಿದು ಸೇವಕರ ಮೇಲೆ ಬೈದು ಸಾಕಷ್ಟು ಕೆಂಡಕಾರಿದನು. ಕಳ್ಳರನ್ನು ಹುಡುಕಲು ಬಹಳ ಪ್ರಯತ್ನಪಟ್ಟರೂ ಏನೂ ಪ್ರಯೋಜನವಾಗಲಿಲ್ಲ. ಆಮೇಲೆ ಎಲ್ಲಾ ತಣ್ಣಗಾಯಿತು. ಒಂದು ದಿನ ರಂಗಪ್ಪ ಆ ಮನೆಯ ಕೆಲಸವನ್ನು ಬಿಟ್ಟು, ತಾನು ಅಡಗಿಸಿಟ್ಟ ಧನವನ್ನು ತೆಗೆದುಕೊಂಡು ಸ್ವಂತ ಊರಿಗೆ ಹಿಂದಿರುಗಿದ. ಅದೇ ಸಮಯಕ್ಕೆ ಪಂಡಿತನಾದ ರಾಮಪ್ಪ ಕೂಡ ಊರಿಗೆ ತಿರುಗಿಬಂದಿದ್ದ.

ಇಬ್ಬರೂ ಹೋಗುವಾಗ ಇದ್ದ ಹಾಗೆ ಬರುವಾಗ ಇರಲಿಲ್ಲ. ಇಬ್ಬರನ್ನೂ ನೋಡಿ ಸೋಮಯ್ಯ ಮಾವನಿಗೆ ತುಂಬ ಸಂತೋಷವಾಯಿತು. ರಾಮಪ್ಪನು ತನ್ನ ಯೋಗ್ಯತೆಯನ್ನು ತೋರಿಸಲು, ಒಂದು ಗ್ರಂಥವನ್ನು ತೆಗೆದು, ಅದರೊಳಗಿನ ಶ್ಲೋಕಗಳನ್ನು ಓದಿ, ಅವುಗಳ ಅರ್ಥ ವಿಶೇಷಾರ್ಥ, ಗೂಢಾರ್ಥಗಳನ್ನು ಹೇಳಿ ಸೋಮಯ್ಯನನ್ನು ಬೆರಗುಪಡಿಸಿದನು.

ರಂಗಪ್ಪ ತನ್ನ ಗಂಟನ್ನು ಬಿಚ್ಚಿ ನಾಣ್ಯಗಳನ್ನು ನೆಲದ ಮೇಲೆ ಸುರಿದನು. ಅಷ್ಟೊಂದು ಧನವನ್ನು ನೋಡಿದ ಕೂಡಲೇ ಸೋಮಯ್ಯನಿಗೆ ಆಶ್ಚರ್ಯವೂ ಸಂತೋಷವೂ ಮೇರೆಮೀರಿತು. ಅವನು ರಂಗಪ್ಪನನ್ನು ಆಲಿಂಗಿಸಿಕೊಂಡು ತನ್ನ ಮಗಳನ್ನು ಅವನಿಗೇ ಕೊಟ್ಟು ಮದುವೆ ಮಾಡಿದ. ಇದನ್ನು ನೋಡಿ ವಿದ್ಯಾವಂತನಾದ ರಾಮಪ್ಪ ಮುಗುಳು ನಕ್ಕು, ತಲೆದೂಗುತ್ತ, ತಾನೇ ಮುಂದೆನಿಂತು ತಮ್ಮನ ಮದುವೆಯ ಕಾರ್ಯಭಾರವಹಿಸಿ ನಡೆಸಿದ. ಆಮೇಲೆ ಅವನು ತನ್ನ ಪಾಂಡಿತ್ಯಕ್ಕೆ ಬೆಲೆಬರುವ ಮಾರ್ಗವನ್ನು ಹುಡುಕುತ್ತ ಹೊರಟುಹೋದ. ಮನುಷ್ಯನ ಪ್ರಯೋಜಕತ್ವವು ಧನದ ಝಣಝಣತೆಯಲ್ಲಿದೆಯೆಂಬುದು ಈಗ ಅವನಿಗೆ ಸ್ಪಷ್ಟವಾಗಿತ್ತು. ಇದನ್ನು ಅವನು ಹೇಗೆ ಸಂಪಾದಿಸಿದನೆಂಬುದನ್ನು ಯಾರೂ ನೋಡುವುದಿಲ್ಲ.





# ಉಚಿತ ಸಲಹೆ

ಒಂದು ಊರಿನಲ್ಲಿ ಗೋವಿಂದನೆಂಬ ಗೃಹಸ್ಥನಿಗೆ ಹಳೆಯ ಅಜ್ಜನ ಕಾಲದ ಮನೆಯೊಂದಿತ್ತು. ಶಿಥಿಲವಾದ ಆ ಮನೆಯನ್ನು ದುರಸ್ತಿ ಮಾಡಿಸುತ್ತಾ, ಮನೆಯ ಸುತ್ತಲೂ ಇರುವ ವಿಶಾಲವಾದ ತೋಟದಲ್ಲಿ ಬಾಳೇ ಗಿಡಗಳನ್ನು ಬೆಳೆಯಿಸಿದ್ದ. ಅವನು ಶ್ರಮಪಟ್ಟು ಬೆಳೆಸಿದುದರಿಂದ ಬಾಳೆಯ ತೋಪು ಹಚ್ಚಗೆ ಕಣ್ಣಿಗೆ ಸೊಂಪಾಗಿ ಕಾಣುತ್ತಿತ್ತು.

ಒಂದು ದಿನ ಬೆಳಿಗ್ಗೆ ಗೋವಿಂದ ಬಾಳೇ ತೋಟಕ್ಕೆ ನೀರೋಳಿ ಕಡಿಯುತ್ತಿದ್ದಾಗ ಜಮೀನುದಾರರ ಹಳೆಯ ಕುದುರೆಗಾಡಿ ಅವನ ಮನೆಯ ಮುಂದೆ ಬಂದು ನಿಂತಿತು. ಅದನ್ನು ನೋಡಿ ಗೋವಿಂದ ಬೆರಗಾಗಿ ಸುಮ್ಮನೆ ನಿಂತ. ಆ ಕುದುರೆಗಾಡಿಯೊಳಗಿನಿಂದ ಜಮೀನುದಾರರ ಹೆಂಡತಿ ಕೆಳಗಿಳಿದು ನಿಂತು, "ಗೋವಿಂದಾ, ಗೋವಿಂದಾ" ಎಂದು ಕರೆದಳು.

"ಬಂದೇಮ್ಮಾ" ಎನ್ನುತ್ತ ಗೋವಿಂದ ಮಣ್ಣಾದ ಕೈಗಳನ್ನು ತೊಳೆದು ಒರೆಸಿಕೊಳ್ಳುತ್ತ ಬೇಗಬೇಗನೇ ಬಂದು ವಿನಯದಿಂದ ನಿಂತ. ಜಮೀನುದಾರರ ಹೆಂಡತಿ ಅವನನ್ನು ನೋಡಿ, "ಏನಯ್ಯಾ ಗೋವಿಂದಾ. ಒಂದು ಮಾತು ಕೇಳಲು ಬಂದೆ. ನಿನ್ನ ಈ ಹಳೇ ಮನೆ ಮತ್ತು ತೋಟ ಕೂಡಾ ನಾನೇ ಕೊಂಡುಕೊಳ್ಳುವಾ ಅಂತ ಮಾಡಿದ್ದೇನೆ. ಮಾರುವಿಯಾ ?" ಎಂದು ಕೇಳಿದಳು.

ಗೋವಿಂದನಿಗೆ ಆಶ್ಚರ್ಯದಿಂದ ಏನು ಹೇಳಲೂ ತೋರಲಿಲ್ಲ. ಜಮೀನುದಾರರ ಹೆಂಡತಿಗೆ ತನ್ನ ಮುರುಕು ಮನೆಯಿಂದ ಏನಾಗಬೇಕೋ ಅವನಿಗೆ ಊಹಿಸಲಾಗಲಿಲ್ಲ.

"ಹಣವನ್ನು ಕುರಿತು ಸಂದೇಹಪಡಬೇಡ. ಐನೂರು ಕೊಡುತ್ತೇನೆ" ಎಂದಳು ಜಮೀನುದಾರರ ಹೆಂಡತಿ. ಇದನ್ನು ಕೇಳಿ ಗೋವಿಂದನಿಗೆ ತನ್ನ ಕಿವಿಗಳನ್ನೇ ನಂಬಲಾಗಲಿಲ್ಲ. ತನ್ನ ಮುರುಕುಮನೆ ಕರಕು ತೋಟಕ್ಕೆ ಇನ್ನೂರು ರೂಪಾಯಿ ಕೂಡಾ ಬೆಲೆ ಬರುವಂತಿಲ್ಲ. ಹಾಗಿರಲು ಒಮ್ಮೆಲೇ ಐನೂರೆಂದರೆ ಅವನ ನಾಲಿಗೆಯೇ ಮೂರ್ಛೆಬಿತ್ತು.

ಅವನಿಂದ ಉತ್ತರ ಬರದಿರುವುದನ್ನು ನೋಡಿ, ಜಮೀನುದಾರರ ಹೆಂಡತಿ, ತಾನು ಹೇಳಿದ ಹಣ ಅವನಿಗೆ ತೃಪ್ತಿಯಾಗಲಿಲ್ಲವೆಂದುಕೊಂಡು, "ಸರಿಯಪ್ಪ. ಹೋಗಲಿ ಬಿಡು. ಏಳುನೂರೈವತ್ತು ಕೊಡುತ್ತೇನೆ. ಒಪ್ಪಿಬಿಡು" ಎಂದಳು.

ಎಂ. ಕೆ. ಈಶ್ವರರಾವ್



ಗೋವಿಂದನಿಗೆ ಕೃತಜ್ಞತೆಯ ಭಾವದಿಂದ ಗಂಟಲು ಕಟ್ಟಿ ಉಸಿರು ನಿಂತಂತಾಯಿತು. ಏಳು ನೂರೈವತ್ತು! ಅದನ್ನಿಟ್ಟುಕೊಂಡು ಎಷ್ಟು ದೊಡ್ಡ ವ್ಯಾಪಾರವನ್ನಾದರೂ ಮಾಡಬಹುದು. ದೊಡ್ಡ ಮನೆಯ ಸುಖಸೌಕರ್ಯಗಳಿಂದ ಅಂದವಾದ ಕೋಣೆಗಳು ಅವನ ಕಣ್ಣ ಮುಂದೆ ತಿರುಗುತ್ತಿರಲು,

ಪಕ್ಕನೆ ಮಾತು ಹೊರಟೀತೆ? ಜಮೀನುದಾರನ ಹೆಂಡತಿ ಬೇಸರಪಟ್ಟು, "ಕಡೇ ಮಾತು. ಸಾವಿರ ರೂಪಾಯಿ ಕೊಟ್ಟುಬಿಡುತ್ತೇನೆ. ಕೊಡುವೆಯೋ ಇಲ್ಲವೋ ಬೇಗನೇ ಹೇಳಿಬಿಡು" ಎಂದಳು.

ಗೋವಿಂದ ಒಪ್ಪಿದ ಹಾಗೆ ತಲೆಯಾಡಿಸಿ, "ಸಾಯಂಕಾಲದೊಳಗೆ ನಾವು ಮನೆಯನ್ನು ಖಾಲೀ ಮಾಡುತ್ತೇವೆ. ಸಾಯಂಕಾಲವೇ ನೀವು ಇದನ್ನು ಸ್ವಾಧೀನ ಮಾಡಿಕೊಳ್ಳಬಹುದು" ಎಂದ.

"ಸಾಯಂಕಾಲ ಹಣಕೊಟ್ಟು ಗುಮಾಸ್ತರನ್ನು ಕಳುಹಿಸುತ್ತೇನೆ" ಎಂದು ಹೇಳಿ ಜಮೀನುದಾರರ ಹೆಂಡತಿ ಗಾಡಿಯಲ್ಲಿ ಏರಿಕೊಂಡಳು. ಅವಳು ತುಂಬ ತೃಪ್ತಳಾದಂತೆ ಕಾಣಿಸಿತು. ಗಾಡಿ ಗಡಗಡನೆ ಹೊರಟುಹೋಯಿತು.

ಗಾಡಿ ಅತ್ತ ಹೋಗುತ್ತಲೇ ಗೋವಿಂದ ತನ್ನ ಹೆಂಡತಿಯನ್ನು ಕರೆದು, "ನಮ್ಮ ಅದೃಷ್ಟ ಹಣ್ಣಾಯ್ತು, ಕಣೆ!" ಎಂದು ಕುಣಿದಾಡಿದ.

ಜಮೀನುದಾರನ ಮನೆಯ ಕುದುರೇಗಾಡಿ ಆ ಮನೆಯ ಮುಂದೆ ನಿಂತ ಮೇಲೆ ಅಲ್ಲಿ ನಡೆದ ಮಾತುಗಳನ್ನೆಲ್ಲ ಅಕ್ಕಪಕ್ಕದ ಅಮ್ಮಂದಿರು ಅಕ್ಕಂದಿರೆಲ್ಲ ಕಿವಿಯನ್ನು ತೀಡಿ ಕೇಳಿಕೊಂಡೇ ಇದ್ದರು. ಅವರೆಲ್ಲಾ ಗೋವಿಂದನ ಹತ್ತಿರ ಬಂದು ಹುಬ್ಬೇರಿಸಿ, "ಈ ಮನೇನ ನಿಜವಾಗಿಯೂ ಮಾರುವಿಯಾ?" ಎಂದು ವಿಚಿತ್ರವಾಗಿ ಕೇಳಿದರು.

"ಅವರಾಗಿ ಬಂದು ಸಾವಿರಾರು ರೂಪಾಯಿ ಕೊಟ್ಟು ಕೊಡಪ್ಪಾ ಅಂತ ಕೇಳುವಾಗ, ಕಷ್ಟಿಯಾಗುವುದುಂಟೆ?" ಎಂದ ಗೋವಿಂದ.

"ಅಯ್ಯೋ! ಎಲ್ಲಾದರೂ ಉಂಟೆ? ನಿನ್ನ ಬುದ್ಧಿಗಿಷ್ಟು ಬೆಂಕಿ ಹಚ್ಚಬೇಕು. ಹೌದು ಗೋವಿಂದಾ, ಈ ಒಂದು ಮುಷ್ಟಿ ಮುರುಕು ಜಾಗಕ್ಕೆ ಸಾವಿರ ರೂಪಾಯಿ ಬೆಲೆ ಏಕೆ ಬರುತ್ತೆ ಎಂಬುದನ್ನು ಯೋಚಿಸಬೇಕೋ ಬೇಡವೋ? ಆ ಜಮೀನುದಾರೀ ಅಮ್ಮಾವರು ಯಾವ ಲಾಭವನ್ನೂ ನೋಡದೆ ಅಷ್ಟು ಹಣ ಕೊಡುತ್ತಾರೇನು? ನಿನ್ನ ತೋಟದಲ್ಲಿಯೋ, ಈ ಮನೆಯಲ್ಲಿಯೋ ಏನೋ ನಿಧಿನಿಕ್ಷೇಪ ಇರುವ ಸಂಗತಿ ಆ ಹೆಂಗಸಿಗೆ ಗೊತ್ತಾಗಿರಬೇಕು. ಯಾರೋ ಅಂಜನಹಾಕಿ ನೋಡಿ ಹೇಳಿರಬೇಕು. ನೀನೊಬ್ಬ ಮೂರ್ಖನ ಹಾಗೆ ಸಾವಿರ ಅಂದ ಕೂಡಲೇ ಬಾಯಿ ಬಾಯಿ ಬಿಟ್ಟೆ. ಯಾವ ಪರಿಸ್ಥಿತಿಯಲ್ಲಿಯೂ ಮಾರಿ ಬಿಡಬೇಡ. ಆ ನಿಧಿನಿಕ್ಷೇಪವನ್ನು ನೀನೇ ಅಗೆದು ತೆಗೆದುಬಿಡು. ಅದು ಎಷ್ಟು ಸಾವಿರದ ನಿಧಿಯೋ!" ಎಂದು ನಾಲ್ಕು ಮಂದಿ ಗೋವಿಂದನಿಗೆ ಹಿತಚಿಂತಕ

ರಾಗಿ ಉಚಿತ ಸಲಹೆ ನೀಡಿ ಅವನನ್ನು ಇಕ್ಕಟ್ಟಿನಲ್ಲಿ ಸಿಕ್ಕಿಸಿ ಹೊರಟುಹೋದರು.

ಗೋವಿಂದ ಯೋಚಿಸುತ್ತಿರುವಾಗ ಅವನ ಹೆಂಡತಿ ಕೂಡ, " ಹೌದು. ಅವರೆಲ್ಲ ಹೇಳಿದ್ದು ನಿಜವೇ. ಬೇಗ ದಲ್ಲೇ ಜಮೀನುದಾರ್ರ ಮಗಳಿಗೆ ಮದುವೆ ಬೇರೆ ಉಂಟು. ಹಾಗಿರುವಾಗ ಸಾವಿರ ರೂಪಾಯಿ ಕೊಟ್ಟು ಈ ಮುರುಕು ಮನೆ ಅವರಿಗೇಕೆ ? ಮಗಳನ್ನು ಈ ಮನೆಗೆ ಗೃಹಪ್ರವೇಶ ಮಾಡಿಸುವರೇ ? " ಖಂಡಿತ ವಾಗಿಯೂ ಈ ಸ್ಥಳದಲ್ಲಿ ನಿಧಿಯಿದೆ," ಎಂದಳು.

ಆ ದಿನ ಸಾಯಂಕಾಲ ಜಮೀನುದಾರರ ಗುಮಾಸ್ತ ಹಣ ತೆಗೆದುಕೊಂಡು ಬಂದ. ಗೋವಿಂದನೂ ಅವನ ಹೆಂಡತಿಯೂ ತಮ್ಮ ಮನೆ, ತೋಟ ಮಾರುವ ಯೋಚನೆಯನ್ನು ಬಿಟ್ಟೆವೆಂದು ಹೇಳಿದುದನ್ನು ಕೇಳಿ, ಅವನು ಗೋವಿಂದನನ್ನು ಒಂದು ರೀತಿಯಾಗಿ ನೋಡಿ, ಗೊಣಗುತ್ತಾ ಸುಮ್ಮನೆ ಹೊರಟುಹೋದ.

ಆ ದಿನ ರಾತ್ರಿಯಲ್ಲಿ ಗೋವಿಂದ, ಲಾಂದರದ ಬೆಳಕಿನಲ್ಲಿ ತೋಟದ ಬಾಳೇ ಗಿಡಗಳನ್ನು ಕಿತ್ತು ಬಿಸುಡುತ್ತ, ತೋಟದೊಳಗೆಲ್ಲಾ ಆಳವಾಗಿ ಅಗೆದು ಅಗೆದು ನೋಡಿದ. ಹೆಂಡತಿಯೂ ತುಂಬ ಸಹಕರಿಸಿದಳು. ಅಲ್ಲೇನೂ ದೊರಕಲಿಲ್ಲ. ಮನೆಯೊಳಗೆ ಕೂಡಾ ಅಗೆದು ನೋಡಿದ್ದಾಯಿತು. ಹಳೆಯ ಗೋಡೆ ಮಾಡುಗಳೂ ಬಿದ್ದುವು.

ಬೆಳಗಾಯಿತು. " ಬಂಗಾರದಂತಹ ವ್ಯಾಪಾರ ವನ್ನು ಕಳೆದುಕೊಂಡೆವಲ್ಲಾ ! " ಎಂದು ಗೋವಿಂದ ಅಳುಗೊರಲಿನಿಂದ ಹೆಂಡತಿಯ ಹತ್ತಿರ ಹೇಳಿದ.

" ಈಗಲಾದರೂ ಮೀರಿ ಹೋಗಲಿಲ್ಲ. ನೀವು ಜಮೀನುದಾರರ ಮನೆಗೆ ಹೋಗಿ, ಅಮ್ಮಾ ಅವರ ಹತ್ತಿರ, ಮನೆ, ತೋಟ ಕೊಡುತ್ತೇನೆಂದು ಹೇಳಿಬಿಡಿ. ಐನೂರು ಕೊಡುವೆನೆಂದರೂ ಒಪ್ಪಿಬಿಡಿ " ಎಂದಳು ಗೋವಿಂದನ ಹೆಂಡತಿ.

ಆದರಂತೆ ಗೋವಿಂದ ಜಮೀನುದಾರರ ಮನೆಗೆ ಹೋಗಿ, ಜಮೀನುದಾರರ ಹೆಂಡತಿಯೊಂದಿಗೆ, "ನಿನ್ನೆ ಯಾರು ಯಾರ ಮಾತನ್ನೋ ಕೇಳಿ, ಬುದ್ಧಿ ಕೆಟ್ಟು, ಕೊಡುವುದಿಲ್ಲ ಅಂದೆ. ನಿಮ್ಮ ಹತ್ತಿರ ಮೊದಲು



ಕೊಡುವೆನೆಂದು ಹೇಳಿ ಮತ್ತೆ ಇಲ್ಲಾ ಅಂದುದು ತಪ್ಪೇ. ಕೊಡುತ್ತೇನೆ. ತೆಗೆದುಕೊಳ್ಳಿ. ನೀವು ಎಷ್ಟು ಬೆಲೆಯನ್ನಾದರೂ ಕೊಡಿರಿ" ಎಂದ.

ಜಮೀನುದಾರಿಣಿ ಚಿಕ್ಕದೊಂದು ನಗುವನ್ನು ನಕ್ಕು, "ಇನ್ನು ನಿನ್ನ ಮನೆ ನನಗೇಕಪ್ಪಾ ? ಪಂಥದಲ್ಲಿ ನಾನು ಸೋತು ಹೋದಾಯಿತು. ಇನ್ನು ಗೆದ್ದೇ ಅನ್ನಲು ಸಾಧ್ಯವಿಲ್ಲ ಬಿಡು" ಎಂದು ತನಗೂ ಜಮೀನುದಾರರಿಗೂ ನಡೆದ ಪಂಥದ ಮಾತು ಕುರಿತು ಹೇಳಿದಳು : ಅದೇನೆಂದರೆ, ಜಮೀನುದಾರರ ಗಾಡಿ ಅವರ ಮುತ್ತಾತನ ಕಾಲದ್ದು. ಜಮೀನುದಾರಿಣಿ ಆ ಮನೆಗೆ ಬಂದಂದಿನಿಂದಲೂ, ಆ ಗಾಡಿಯನ್ನು ಮಾರಿ ಹೊಸ ಗಾಡಿ ಕೊಂಡುಕೊಳ್ಳಬೇಕೆಂದು ಹೇಳುತ್ತಲೇ ಇದ್ದಳು. ಆದರೆ ಜಮೀನುದಾರರಿಗೆ ಆ ಹಳೇ ಗಾಡಿಯೆಂದರೆ ಪ್ರಾಣ. ಅವರ ತಾತ ಮುತ್ತಾತರೆಲ್ಲ ಅದರಲ್ಲೇ ಪ್ರಯಾಣಮಾಡಿದವರು.

"ಪೂರ್ವಿಕರಿಂದ ಬಂದ ವಸ್ತುಗಳನ್ನು ಯಾರೂ ಬಿಟ್ಟುಬಿಡಲಾರರು. ಬೇಕಾದರೆ ನೋಡು. ಊರ ಹೊರಗೆ ಬಾಳೆ ತೋಟ ಮಾಡಿಕೊಂಡಿರುವ ಗೋವಿಂದನಂಥವನು ಕೂಡಾ ತಮ್ಮ ಅಜ್ಜ ಮುತ್ತಜ್ಜಂದಿರ ಕಾಲದ ಮುರುಕು ಮನೆಯನ್ನು ಬಿಡಲಾರನು. ಆಳೆತ್ತರ ಹಣ ಸುರಿದರೂ ಹಳೆಯ ಕಾಲದ ಮನೆಯನ್ನು ಮಾರಲಾರರು. ಬೇಕಾದರೆ ಆ ಗೋವಿಂದನನ್ನೇ ಕೇಳಿ ನೋಡು. ಅವನು ಅದನ್ನು ಮಾರಿದರೆ ನಾನೂ ಹಳೇ ಗಾಡಿ ಮಾರುತ್ತೇನೆ." ಎಂದರು ಜಮೀನುದಾರರು.

ಆ ಮಾತಿನ ಮೇಲೆ ಗಂಡಹೆಂಡಿರಿಬ್ಬರೂ ಸಾವಿರ ರೂಪಾಯಿ ಪಂಥ ಕಟ್ಟಿಕೊಂಡರು. ಆ ಪಂಥದಲ್ಲಿ ಜಮೀನುದಾರನ ಹೆಂಡತಿ ಸೋತುಹೋಗಿದ್ದಳು. ಇನ್ನು ಆ ತೋಟ ಇದ್ದರೇನು, ಹೋದರೇನು ?

"ಈ ಪಂಥದಲ್ಲಿ ನಾನೇ ಗೆಲ್ಲುವೆನೆಂಬ ಧೈರ್ಯದಿಂದ, ಹೊಸ ಗಾಡಿ ಕೊಂಡುಕೊಳ್ಳಬಹುದೆಂಬ ನಂಬುಗೆಯಿಂದ ನಿನಗೆ ಸಾವಿರ ರೂಪಾಯಿ ಕೊಡುವೆನೆಂದು ಹೇಳಿದೆ. ನೀನು ಊರಿನವರ ಉಚಿತ ಬುದ್ಧಿವಾದಗಳನ್ನು ಕೇಳಿ ನನ್ನ ಆಶೆಯನ್ನೆಲ್ಲಾ ಕೆಡಿಸಿಬಿಟ್ಟೆ. ನಿನಗೆ ಗೊತ್ತಿದೆಯೆ ? ನಿನಗೆ ಬುದ್ದಿ ಹೇಳಿದವರೆಲ್ಲಾ ನನ್ನ ಬಳಿಗೆ ಬಂದು, ತಮ್ಮ ಮನೆಗಳನ್ನು ಐನೂರಕ್ಕೇ ನನಗೆ ಕೊಡುತ್ತೇನೆಂದು ಹೇಳಿದರು. ಇನ್ನಾದರೂ ಬುದ್ಧಿ ತಂದುಕೋ. ನಾಲ್ಕು ಮಂದಿಯ ಮಾತು ಕೇಳಿ ನೀನು ನಷ್ಟ ಮಾಡಿಕೊಂಡೆ. ಈಗ ನೀನು ಮಾರುವೆನೆಂದು ಹೇಳಿದರೆ, ನಮ್ಮ ಪಂಥಕ್ಕೆ ಯಾವ ಸಂಬಂಧವೂ ಇಲ್ಲ." ಎಂದಳು ಜಮೀನುದಾರನ ಹೆಂಡತಿ. ಗೋವಿಂದ ತಲೆ ತಗ್ಗಿಸಿಕೊಂಡು ಮನೆ ದಾರಿ ಹಿಡಿದ. ಬರಿಗೈಯಿಂದ ಬಂದ ಗಂಡನನ್ನು ನೋಡಿ ಹೆಂಡತಿಯ ಮುಖ ಕಪ್ಪಾಯಿತು.





# ಚಂದ್ರದ್ವೀಪದ ವರ್ತಕ

ಅನೇಕ ವರ್ಷಗಳ ಹಿಂದೆ ಚಂದ್ರದ್ವೀಪವೆಂಬಲ್ಲಿ ಚಂದ್ರಸಾಗರನೆಂಬ ಪ್ರಸಿದ್ಧ ವರ್ತಕನಿದ್ದ. ಒಂದುಸಾರಿ ಅವನು ಮೂರು ಹಡಗುಗಳಲ್ಲಿ ಢಾಕಾನಗರದ ಮೇಲ್ದರಗತಿಯ ವಸ್ತ್ರಗಳು, ಮುರ್ಷಿದಾಬಾದಿನ ದಂತದ ಸಾಮಾನುಗಳು, ಕಂಚು ಸಾಮಗ್ರಿಗಳು, ದಂತದ ಕೊರಡುಗಳು, ಬೊಂಬೆಗಳು ಮುಂತಾದ ಬೆಲೆಬಾಳುವ ಸರಕುಗಳನ್ನು ತುಂಬಿಸಿ, ಏಳುನೂರು ಮಂದಿ ನಾವಿಕರೊಂದಿಗೆ ಬಹುದೂರದ ಯವ ದ್ವೀಪಕ್ಕೆ ಪ್ರಯಾಣ ಹೊರಟನು.

ಕೆಲವು ದಿನಗಳವರೆಗೆ ಸಮುದ್ರ ಪ್ರಯಾಣ ಸೊಗಸಾಗಿ ಸಾಗಿತು. ಮೂರನೇ ವಾರದಲ್ಲಿ ಒಂದು ಜಲಸಂಧಿಯ ಹತ್ತಿರ ಪ್ರಯಾಣಿಕರಿಗೆ ಏನೇನೋ ವಿಚಿತ್ರ ದೃಶ್ಯಗಳು ಕಾಣತೊಡಗಿದುವು. ವಿವೇಕದಿಂದ ವಿಜ್ಞಾನವನ್ನು ಬೆಳಗಿಸಿಕೊಂಡಿದ್ದ ಚಂದ್ರಸಾಗರನು ಮೊದಮೊದಲು ಅವುಗಳನ್ನು ಲಕ್ಷ್ಯ ಮಾಡಲಿಲ್ಲ. ಅವೆಲ್ಲಾ ಮರಳುಗಾಡಿನಲ್ಲಿ ಕಾಣುವ ಮರೀಚಿಕೆಗಳಂತಹ ಭ್ರಾಂತಿಯೇ ಹೊರತು, ಬೇರೇನಲ್ಲವೆಂದು ಇತರರಿಗೂ ಹೇಳಿದನು. ಆದರೆ ಕಡೆಗೆ ಅದೊಂದು ಅದ್ಭುತ ದೃಶ್ಯವು ಅವನ ಮನಸ್ಸನ್ನು ಕೂಡಾ ಆಕರ್ಷಿಸಿಬಿಟ್ಟಿತು. ಸಮುದ್ರದ ನೀರಿನ ಮೇಲೆ ನೃತ್ಯ ಮಾಡುತ್ತ ಚಿನ್ನದ ದಂತಗಳಿರುವ ಒಂದು ಬೆಳ್ಳಗಿನ ಆನೆಯನ್ನು ನೋಡಿ ಪರವಶನಾದನು.

"ಹೇಗಾದರೂ ಮಾಡಿ ಆ ಆನೆಯನ್ನು ಹಿಡಿಯಿರಿ ನೋಡೋಣ." ಎಂದು ಅವನು ನಾವಿಕರಿಗೆ ಹೇಳಿದನು. ನಾವಿಕರ ಪ್ರಯತ್ನದಿಂದ ಅವನ ಹಡಗುಗಳು ಆನೆಯನ್ನು ಮುತ್ತಿ ಹಿಡಿಯಲು ನೋಡಿದುವು. ಆದರೆ ಆನೆ ಹೇಗೋ ತಪ್ಪಿಸಿಕೊಂಡು ಮತ್ತಿಷ್ಟು ದೂರದಲ್ಲಿ ನೀರಿನಮೇಲೆ ನಾಟ್ಯವಾಡುತ್ತಿದ್ದಿತು. ಚಂದ್ರಸಾಗರನ ಹಡಗುಗಳು ಪುನಃ ಅದನ್ನು ಸಮೀಪಿಸಿ ಹಿಡಿಯಲು ಹೋದುವು. ಆನೆ ಪುನಃ ತಪ್ಪಿಸಿಕೊಂಡು ಮತ್ತಷ್ಟು ದೂರದಲ್ಲಿ ಕಾಣಿಸಿತು. ಹೀಗೆ ಆ ಹಡಗುಗಳು ಹೋಗಿ ಹೋಗಿ, ದಾರಿ ತಪ್ಪಿ, ವಿಶಾಲವಾದ ಸಮುದ್ರವನ್ನು ಪ್ರವೇಶಿಸಿಬಿಟ್ಟುವು. ಆನೆಯೂ ಕಾಣಲಿಲ್ಲ.

ಸೂರ್ಯನೂ ಅಸ್ತಮಿಸಿ ಕತ್ತಲಾಯಿತು. ಸಾಲದುದಕ್ಕೆ ಸಮುದ್ರದ ಮೇಲೆ ಪ್ರಚಂಡವಾದ ಬಿರುಗಾಳಿಯೆದ್ದಿತು. ಆ ಗಾಳಿಗೆ ಸಿಕ್ಕಿ ನಾವಿಕರ ಹತೋಟಿ ತಪ್ಪಿ, ಹಡಗುಗಳು ಸಿಕ್ಕಾಬಟ್ಟೆ ಹೋದುವು.

ಪಿ. ಸಿ. ಸರ್ಕಾರ್, ಐಂದ್ರಜಾಲಿಕರು



ಕಡೆಗೆ ಮೂರು ಹಡಗುಗಳೂ ಸಮುದ್ರದಲ್ಲಿದ್ದ ಹೆಬ್ಬಂಡೆಗಳಿಗೆ ಹೊಡೆದು ಒಡೆದುವು. ಸರಕುಗಳೂ ನಾವಿಕರೂ ನೀರ ಪಾಲಾದರು.

ಒಡೆದು ಚೂರಾದ ಹಡಗಿನ ಹಲಗೆಗಳನ್ನು ಹಿಡಿದುಕೊಂಡು ಚಂದ್ರಸಾಗರನೂ, ಆರುಮಂದಿ ನಾವಿಕರೂ ತಮ್ಮ ಜೀವವುಳಿಸಿಕೊಂಡು, ತೇಲುತ್ತಾ, ಎರಡು ದಿನ ಸಮುದ್ರದಲ್ಲಿ ಕಳೆದರು. ಅನಂತರ ತೆರೆಗಳ ಒಯ್ಲಿನೊಂದಿಗೆ ಯಾವುದೋ ಪರ್ವತ ಮಯವಾದ ಒಂದು ತೀರಕ್ಕೆ ತಳ್ಳಲ್ಪಟ್ಟರು.

ಹಸಿವೆಯಿಂದ, ಬಳಲಿಕೆಯಿಂದ ತುಂಬ ನಿಃಶಕ್ತರಾದ ಆ ಏಳು ಮಂದಿಯೂ, ಸಮೀಪದಲ್ಲಿ ಕಂಡ ತೆಂಗಿನ ಮರಗಳ ಬುಡಕ್ಕೆ ಹೋದರು. ಬಿರುಗಾಳಿಗೆ ಉದುರಿದ ಕೆಲವು ತೆಂಗಿನ ಕಾಯಿಗಳನ್ನು ಒಡೆದು ತಮ್ಮ ಹಸಿವೆ ದಾಹಗಳನ್ನು ಸ್ವಲ್ಪ ಶಮನಗೊಳಿಸಿಕೊಂಡು "ಬದುಕಿದೆವಪ್ಪಾ" ಎಂದುಕೊಂಡು, ಅತ್ತಿತ್ತ ನೋಡಿದರು. ಅವರು ಸೇರಿದ ಆ ದ್ವೀಪ ಸಮುದ್ರ ತೀರಕ್ಕೆ ಬಹಳ ಎತ್ತರವಾಗಿದ್ದಿತು. ಸುತ್ತಲೂ ಇರುವ ಬೆಟ್ಟಗಳು ನಿಟಾರುನೀಟಾಗಿ ಏರಲು ಕಡಿದಾಗಿದ್ದುವು. ಏಳು ಜನರೂ ಆ ದ್ವೀಪದ ಸುತ್ತಲೂ ಪ್ರದಕ್ಷಿಣೆ ಮಾಡಿ, ಪಶ್ಚಿಮ ದಿಕ್ಕಿನ ಬೆಟ್ಟಗಳ ಮಧ್ಯದಲ್ಲಿ ಚಿಕ್ಕದೊಂದು ಕಣಿವೆ ದಾರಿ ಇರುವುದನ್ನು ಕಂಡು ಹಿಡಿದರು. ಆ ಕಣಿವೆಗೆ ಒಂದು ಬಾಗಿಲೂ ಇತ್ತು. ಅದರ ಹತ್ತಿರ ಕಾವಲು ಭಟರು ನಿಂತಿದ್ದರು. ಅವರನ್ನು ನೋಡಿ ಎಲ್ಲರಿಗೂ ಜೀವಿತದ ಮೇಲೆ ತುಸು ನಂಬಿಕೆ ಬಂತು.

ಏಳುಮಂದಿ ಹೊಸಬರನ್ನು ನೋಡಿದಕೂಡಲೇ ಆ ಕಾವಲು ಭಟರು ಅವರನ್ನೆಲ್ಲ ಬಂಧಿಸಿ, ಕಣಿವೆಯ ದಾರಿಯಿಂದ ಸಾಗಿಸುತ್ತ ಒಂದು ನಗರಕ್ಕೆ ಹೋದರು. ಆ ಭಟರು ಮಾತಾಡುವ ಭಾಷೆ ಚಂದ್ರಸಾಗರನ ಗುಂಪಿಗೆ ತಿಳಿಯದು.

ನಗರದ ಬೀದಿಗಳಲ್ಲಿ ನಡೆಯುವಾಗ ನಾವಿಕರಿಗೆಲ್ಲ ಬಹಳ ಆಶ್ಚರ್ಯವೆನಿಸಿತು. ಏಕೆಂದರೆ ಆ ನಗರದಲ್ಲಿ ಕಣ್ಣಿಗೆ ಬಿದ್ದ ಸ್ಥಳದಲ್ಲೆಲ್ಲಾ ಲಕ್ಷ್ಮಿ ತಾಂಡವವಾಡುತ್ತಿದ್ದಳು. ಎಲ್ಲೆಲ್ಲಿಯೂ ಚಿನ್ನಗಳೂ ರತ್ನಗಳೂ ಕಾಣುತ್ತಿದ್ದುವು. ಹೊತ್ತು ಮುಳುಗುವ ಸಮಯಕ್ಕೆ ಭಟರು ಒಂದು ಸ್ಥಳವನ್ನು ತಲಪಿ, ಏಳು ಜನರನ್ನೂ ಕಾರಾಗೃಹದಲ್ಲಿ ಬಂಧಿಸಿ ಹೋಗಿಬಿಟ್ಟರು.

ಮರುದಿನ ಬೆಳಿಗ್ಗೆ ಭಟರು ಅವರನ್ನೆಲ್ಲ ಕರೆದುಕೊಂಡು ರಾಜನ ದರ್ಬಾರಿಗೆ ಹೋದರು. ಇಲ್ಲಿ ತಮ್ಮ ವಿಚಾರಣೆ ನಡೆಯುವುದೆಂದು ಗ್ರಹಿಸಿ ಚಂದ್ರಸಾಗರನೇ ಮೊದಲಾದವರು ರಾಜನಿಗೆ ಬಗ್ಗಿ ನಮಸ್ಕಾರ ಮಾಡಿದರು.

ಅದನ್ನು ನೋಡಿ ರಾಜನಿಗೆ ಬಹಳ ಸಂತೋಷವಾಯಿತು. "ನಿಮಗೆ ಏನು ಬೇಕು? ಯಾರು ನೀವು? ಎಲ್ಲಿಂದ ಬಂದವರು? ಏಕೆ ಬಂದಿದ್ದೀರಿ?" ಎಂದು ಮುಂತಾಗಿ ರಾಜನು ಮಾಡಿದ ಪ್ರಶ್ನೆ ಅವರಾರಿಗೂ ಅರ್ಥವಾಗಲಿಲ್ಲ.

ಸ್ವಲ್ಪ ಹೊತ್ತು ಆಲೋಚನೆ ಮಾಡಿದ ಮೇಲೆ ರಾಜನು ಸಂಜ್ಞೆಗಳ ಭಾಷೆಯಲ್ಲಿ ತನ್ನ ಪ್ರಶ್ನೆಗಳನ್ನು ಪ್ರಕಟಿಸಿದನು. ಚಂದ್ರಸಾಗರನು ಅದನ್ನು ಅರ್ಥ ಮಾಡಿಕೊಂಡು ಸಂಜ್ಞೆಗಳಿಂದಲೇ ಉತ್ತರಗಳನ್ನು ಸ್ಪಷ್ಟಪಡಿಸಿದನು. ಅವನು ತನ್ನ ಪರಿವಾರ ಮತ್ತು ಸರಕುಗಳೊಂದಿಗೆ ಸಮುದ್ರದ ಪಾಲಾಗಿ, ಇಷ್ಟು ಮಂದಿ ಉಳಿದಿರುವ ಸಂಗತಿಯೂ, ಅವರೆಲ್ಲ ಈ ದ್ವೀಪದಲ್ಲಿ ಸ್ಥಿರವಾಗಿರುವುದಕ್ಕೆ ಇಷ್ಟಪಡುತ್ತಾರೆಂತಲೂ ರಾಜನಿಗೆ ಅರ್ಥವಾಯಿತು.

ರಾಜನು ತಲೆಯಾಡಿಸಿ, ತನ್ನ ಭಟರಿಂದ ಒಂದು ಲೋಟವನ್ನೂ ನೀರಿನ ಪಾತ್ರವನ್ನೂ ತರಿಸಿ, ಲೋಟೆಯ ತುಂಬಾ ನೀರನ್ನು ಸುರಿದನು. ತರುವಾಯ ಅವನು ಹೊಸಬರಾದ ಏಳು ಜನರಿಂದಲೂ ಏಳು ಉಂಗುರಗಳನ್ನು ತೆಗೆದುಕೊಂಡು ಅವುಗಳನ್ನು ಆ ನೀರಿನ ಲೋಟದೊಳಗೆ ಹಾಕಿದನು. ಆಗ ಲೋಟದ ನೀರು ತುಂಬಿ ಸೂಸಿ ಕೆಳಕ್ಕೆ ಜಾರತೊಡಗಿತು. ಅದನ್ನು ನೋಡಿ ರಾಜನು ಅರ್ಥಮಾಡಿಕೊಂಡವನಂತೆ ತಲೆ ದೂಗಿದನು. ಸಂಜ್ಞೆಯಿಂದ ತನ್ನ ಅಭಿಪ್ರಾಯವನ್ನು ತಿಳಿಸಿದನು. ಏನೆಂದರೆ: ಈ ನಗರವು ಆಗಲೇ ಜನರಿಂದ ತುಂಬಿಹೋಗಿರುವುದೆಂದೂ, ಹೊಸಬರನ್ನು ಸೇರಿಸಿದರೆ ಅಶಾಂತಿಯುಂಟಾಗುವುದೆಂದೂ ಗಾಜನಲ್ಲಿ ಅದರಿಂದುಂಟಾದ ಭಾವವಾಗಿತ್ತು.

ಇದನ್ನು ತಿಳಿದು ಚಂದ್ರಸಾಗರನೇ ಮೊದಲಾದವರಿಗೆ ಆಶಾಭಂಗವಾಯಿತು. ಏನೂ ತೋರದೆ ಬಾಡಿದ ಮುಖದಿಂದ ನಿಂತಿರುವವರನ್ನು ನೋಡಿ ರಾಜನು ಕನಿಕರದಿಂದ, ಅವರು ನಗರದಲ್ಲಿ ಎರಡೇ ಎರಡುದಿನ ಮಾತ್ರ ಇರಬಹುದೆಂದು ಅನುಮತಿ ನೀಡಿದನು. ಬೇರೆ ಉಪಾಯ ವಿಲ್ಲದುದಕ್ಕೆ ವಿಷಾದವನ್ನೂ ವ್ಯಕ್ತಪಡಿಸಿದನು.

ನಾವಿಕರಲ್ಲೊಬ್ಬ ಚಂದ್ರಸಾಗರನೊಂದಿಗೆ, "ಅಯ್ಯಾ, ನಾವು ಎರಡುದಿನಗಳೊಳಗೆ ಹೇಗೆ



ಹೊರಡಲು ಸಾಧ್ಯವಾದೀತು? ಇನ್ನೊಂದು ಹಡಗನ್ನು ತಯಾರಿಸುವ ವರೆಗಾದರೂ ಈ ನಗರದಲ್ಲೇ ಇರಬೇಕಷ್ಟೆ? ಸಮುದ್ರದಲ್ಲಿರಲು ಸಾಧ್ಯವಿಲ್ಲವಷ್ಟೆ? ಅದಕ್ಕೇನಾದರೂ ಉಪಾಯ ಮಾಡಬೇಕಲ್ಲ?" ಎಂದನು ದೀನನಾಗಿ.

"ನಾನೂ ಅದೇ ಆಲೋಚನೆಯಲ್ಲಿದ್ದೇನೆ." ಎನ್ನುತ್ತಾ ಚಂದ್ರಸಾಗರನು ತನ್ನವರೊಂದಿಗೆ ನಗರವನ್ನು ಸುತ್ತಿನೋಡಲು ಹೊರಟನು. ಅದೂ ಇದೂ ನೋಡುತ್ತ ನಡೆಯುತ್ತ, ಒಂದು ಅಂಗಡಿಯ ಮುಂದೆ ನಿಂತರು. ಆ ಅಂಗಡಿಯಲ್ಲಿ ಗೃಹೋಪಕರಣಗಳನ್ನು ಮಾರುತ್ತಿದ್ದರು. ಅದನ್ನು ನೋಡುವಾಗ ಚಂದ್ರಸಾಗರನಿಗೆ ಒಂದು ಆಲೋಚನೆ ಬಂದಿತು.

ಕೂಡಲೇ ಚಂದ್ರಸಾಗರನು ತನ್ನ ಬೆರಳಿನಲ್ಲಿರುವ ಮೂರು ಉಂಗುರಗಳಲ್ಲಿ ಒಂದನ್ನು ಅಡವಿಟ್ಟು ಉದ್ದವಾದ ನಳಿಕೆಯಿರುವ ಲಾಳಿಕೆಯನ್ನೂ, ಒಂದು ಗಾಜು ಲೋಟವನ್ನೂ ಕೊಂಡುಕೊಂಡನು. "ಇವುಗಳು

ಏತಕ್ಕೆ ?" ಎಂದು ಅವನ ಅನುಚರನೊಬ್ಬ ಕೇಳಿದ. "ಈಗೇನೂ ಕೇಳಬೇಡ. ಸುಮ್ಮನೆ ನೋಡುತ್ತಾ ಇರು" ಎಂದ ಚಂದ್ರಸಾಗರ.

ಅವನು ತನ್ನ ಅನುಚರರೊಂದಿಗೆ ಕೂಡಿ ರಾಜನ ದರ್ಬಾರಿಗೆ ಹೋದನು. ಅವನ ಕೈಯಲ್ಲಿ ಲೋಟವಿದ್ದಿತು. ಲಾಳಿಕೆ ಮಾತ್ರ ಅವನ ಜೇಬಿನಲ್ಲಿ ಮರೆಯಾಗಿತ್ತು. ಅವನು ರಾಜನಿಗೆ ನಮಸ್ಕಾರ ಮಾಡಿ, ಪಕ್ಕದಲ್ಲಿದ್ದ ಕೋಣೆಯೊಳಗೆ ಸ್ವಲ್ಪ ಹೊತ್ತು ಇರಲು ಅನುಮತಿ ಕೇಳಿದನು. ಆಗಲಿ ಎಂದು ರಾಜನು ಒಪ್ಪಿದ ಮೇಲೆ, ತನ್ನ ಅನುಚರರೊಂದಿಗೆ ಆ ಕೋಣೆಯೊಳಗೆ ಹೊಕ್ಕನು. ಸ್ವಲ್ಪ ಹೊತ್ತಿನ ಮೇಲೆ ಅವನು ಆ ಕೋಣೆಯಿಂದ ಹೊರಗೆ ಬಂದು, ರಾಜನನ್ನು ಕೋಣೆಯೊಳಗೆ ಬರುವಂತೆ ಆಹ್ವಾನಿಸಿದನು.

ರಾಜನು ಏನೋ ಕುತೂಹಲದಿಂದ ಕೋಣೆಯೊಳಗೆ ಹೋದನು. ಚಂದ್ರಸಾಗರನು, ತನ್ನ ಮತ್ತು ತನ್ನ ಅನುಚರರ ಏಳು ಉಂಗುರಗಳನ್ನೂ ತೆಗೆದುಕೊಂಡು, ನೀರು ತುಂಬಿಕೊಂಡಿದ್ದ ಗಾಜಿನ ಲೋಟವನ್ನು ರಾಜನಿಗೆ ತೋರಿಸಿದನು. ರಾಜನು ಆಸಕ್ತಿಯಿಂದ ನೋಡುತ್ತಿರಲು, ಚಂದ್ರಸಾಗರನು ಏಳು ಉಂಗುರಗಳನ್ನೂ ಒಂದರ ಹಿಂದೆ ಒಂದಾಗಿ ನೀರಿನ ಲೋಟಕ್ಕೆ ಹಾಕಿದನು. ನೀರು ತುಂಬಿದ ಲೋಟದಿಂದ ಒಂದು ಬಿಂದು ನೀರು ಕೂಡಾ ಕೆಳಗೆ ಸೂಸಲಿಲ್ಲ. ಆ ಲೋಟ ತುಂಬಿದ ನೀರಿನೊಂದಿಗೆ ಏಳು ಉಂಗುರಗಳಿಗೂ ಸ್ಥಳವಿದ್ದಿತು.

ರಾಜನು ಮೆಚ್ಚಿದುದಕ್ಕೆ ಗುರುತಾಗಿ ನಕ್ಕು ಚಂದ್ರಸಾಗರನ ಭುಜ ತಟ್ಟಿ ಒಂದು ಉಂಗುರವನ್ನು ಅವನಿಗೆ ಬಹುಮಾನವಾಗಿ ಕೊಟ್ಟು, ಮಂತ್ರಿಯ ಕಿವಿಯಲ್ಲಿ ಏನೋ ಹೇಳಿದನು. ಮಂತ್ರಿ ಸಂಜ್ಞೆಯಿಂದ ಅಭಿನಯದಿಂದ ಚಂದ್ರಸಾಗರನೊಂದಿಗೆ, ಅವನೂ ಅವನ ಕಡೆಯವರೂ ಇಷ್ಟಬಂದಷ್ಟು ಕಾಲದವರೆಗೆ ಆ ರಾಜ್ಯದಲ್ಲಿರಬಹುದೆಂದು ಸ್ಪಷ್ಟಪಡಿಸಿದನು.

ಚಂದ್ರಸಾಗರನಿಗೆ ಗೊತ್ತಿದ್ದ ಇಂದ್ರಜಾಲವು ಅವನಿಗೂ ಅವನ ಅನುಚರರಿಗೂ ಬಂದ ಕಷ್ಟದಲ್ಲಿ ಕೈಕೊಟ್ಟು ಕಾಪಾಡಿತು. ಚಂದ್ರಸಾಗರನು ಕೋಣೆಯೊಳಗೆ ಏನು ಮಾಡಿದನೆಂದರೆ, ಅವನು ಮುಂದಾಗಿ ಲೋಟದ ಅಂಚನ್ನು ಒಣಬಟ್ಟೆಯಿಂದ ಒಂದಿಷ್ಟು ಪಸೆಯೂ ಇಲ್ಲದಂತೆ ಒರೆಸಿದನು. ಬಳಿಕ ಲಾಳಿಕೆಯ ಮೂಲಕವಾಗಿ ಅದರ ತುಂಬ ನೀರು ತುಂಬಿಸಿ, ಅಂಚಿಗೆ ನೀರ ಪಸೆ ಕೂಡಾ ತಾಕದಂತೆ ಜಾಗ್ರತೆ ವಹಿಸಿದನು. ಇದೇ ಈ ಇಂದ್ರಜಾಲದ ಗುಟ್ಟು. ಲೋಟದ ಅಂಚಿನಲ್ಲಿ ಒಂದು ಚೂರು ನೀರಿನ ಪಸೆಯಿದ್ದರೂ ನೀರು ಕೆಳಗೆ ಸೂಸಿಬಿಡುತ್ತಿತ್ತು. ಉಂಗುರವನ್ನು ನೀರಿನೊಳಗೆ ಹಾಕುವಾಗಲೂ ನೀರಿನ ಹನಿ ಸಿಡಿದು ಅಂಚಿಗೆ ಬೀಳದಂತೆ ನೋಡಿಕೊಂಡನು.



## ೧೬೧. ಪ್ರಾಚೀನ ಸ್ಮಶಾನ ನಿಕ್ಷೇಪ

ಕ್ರಿಮಿಯಾ ದ್ವೀಪಕಲ್ಪದ ಈಶಾನ್ಯ ಪ್ರಾಂತದಲ್ಲಿ ಕಳೆದ ೧೯೨೪ರ ಮಧ್ಯಗಲ್ಲಿ ಒಂದು ಪ್ರಾಚೀನಕಾಲದ ಸ್ಮಶಾನವು ಹೊರಬಿದ್ದಿತ್ತು. ಇದನ್ನು ನಗೈಚಿನ್‌ಸ್ಕಿ ದಿಣ್ಣೆ ಅನ್ನುವರು. ಇದರಲ್ಲಿ ಕಂಚಿನ ಕನ್ನಡಿ, ಬೆಳ್ಳಿ ಪಾತ್ರ ಗಳು, ಚಿನ್ನದ ಬಳೆಗಳು, ಗೊಲುಸು ಮೊದಲಾದ ಅನೇಕ ವಸ್ತುಗಳು ಸಿಕ್ಕಿವೆ. ಇವುಗಳನ್ನು ಎರಡು ಸಾವಿರ ವರ್ಷಗಳ ಕೆಳಗೆ ಸರ್ಮಾತಿಯಾ ಗ್ರೀಸು ಶಿಲ್ಪಿಗಳು ಸರ್ಮಾತಿಯಾ ರಾಣಿಯದೆಂದು ಭಾವಿಸುವರು. ಆಭರಣ ಗಳ ಶಿಲ್ಪವು ಚಿತ್ರದಲ್ಲಿದೆ.





# ಸ್ನೇಹಿತರು

ಅನೇಕ ನೂರು ವರ್ಷಗಳ ಹಿಂದೆ ಅಜೇಕರ್ತನೆಂಬ ಜ್ಞಾನಧನನಾದ ಮುನಿಯಿದ್ದನು. ಆತನ ಹತ್ತಿರ ಇಬ್ಬರು ಶಿಷ್ಯರು ಸೇವೆ ಮಾಡಿಕೊಂಡಿದ್ದರು. ಅವರಲ್ಲಿ ಶುನಶ್ಶೇಪನೆಂಬವನು ಕೋಪ ಸ್ವಭಾವದವನು. ಅವನು ತನ್ನ ಸಹಾಧ್ಯಾಯಿಯಾಗಿದ್ದ ರೋಹಿತನೊಡನೆ ಯಾವಾಗಲೂ ಜಗಳವಾಡಿಕೊಂಡಿರುವನು. ಆದುದರಿಂದ ಶಾಂತಗುಣದವನಾದ ರೋಹಿತನು ಬರುಬರುತ್ತ ಸಾಧ್ಯವಾದಷ್ಟುಮಟ್ಟಿಗೆ ಶುನಶ್ಶೇಪನಿಂದ ದೂರದಲ್ಲೇ ಇರುತ್ತಿದ್ದ.

ತನ್ನ ಈ ಇಬ್ಬರು ಶಿಷ್ಯರು ಬಂದ ಹೊಸತರಲ್ಲಿ ತುಂಬ ಸ್ನೇಹಿತರಾಗಿದ್ದು, ಬರುಬರುತ್ತ ದೂರ ದೂರವಾಗುವುದನ್ನು ಅಜೇಕರ್ತ ಮುನಿ ಗಮನಿಸಿದನು. ಒಂದುದಿನ ಅವನು ರೋಹಿತನನ್ನು ನೋಡಿ, "ಇತ್ತೀಚೆಗೆ ನೀವಿಬ್ಬರೂ ದೂರದೂರವಾಗಿರುವಿರೇಕೆ? ನೀನು ಶುನಶ್ಶೇಪನಿಗಿಂತ ಒಂದು ವರ್ಷಕ್ಕೆ ದೊಡ್ಡವನಾದುದರಿಂದ ಕಾರಣವೇನೆಂದು ನಿನ್ನನ್ನೇ ಕೇಳುತ್ತೇನೆ" ಎಂದನು.

"ಅಯ್ಯಾ, ಅವನಿಗೆ ಕೋಪ ಜಾಸ್ತಿ. ಇಬ್ಬರೂ ಕೂಡಿಕೊಂಡಿದ್ದರೆ ಸಣ್ಣಪುಟ್ಟ ಮಾತಿಗೆಲ್ಲ ಜಗಳ ಬರುತ್ತದೆ. ಅವನ ಕೋಪ ನನ್ನನ್ನು ಕೂಡಾ ಅಂಟುವುದೆಂದು ಹೆದರಿ ನಾನು ದೂರದಲ್ಲಿರುತ್ತೇನೆ. ಮತ್ತಾವ ಕಾರಣವೂ ಇಲ್ಲ." ಎಂದ ರೋಹಿತ.

"ನಿನಗೆ ಅವನ ಮೇಲೆ ಒಳ್ಳೆಯ ಭಾವ ಇರುವುದೆಂದು ಅವನಿಗೆ ಅರ್ಥವಾದರೆ ಸಾಕಲ್ಲ? ಅವನ ಕೋಪ ನಿನಗೆ ಅಂಟುವುದು ನಿಜವಾದರೆ ನಿನ್ನ ಶಾಂತ ಗುಣ ಕೂಡಾ ಅವನಿಗೆ ಅಂಟಬಹುದಷ್ಟೆ? ಆ ವಿಧವಾಗಿ ಅವನ ಕೋಪ ತಣಿಯಲೂ ಬಹುದು. ಇದಕ್ಕೆ ನಿದರ್ಶನವಾಗಿ ನಿನಗೊಂದು ಕಥೆ ಹೇಳುತ್ತೇನೆ ಕೇಳು" ಎಂದು ಅಜೇಕರ್ತ ಮುನಿ ಒಂದು ಕಥೆ ಹೇಳಿದನು:

ಒಂದು ಊರಿನಲ್ಲಿ ರಮಾನಂದ ಮತ್ತು ಸೀಮಾನಂದರೆಂಬವರು ಮಿತ್ರರಾಗಿದ್ದರು. ಅವರಿಬ್ಬರೂ ಒಂದೇ ಬಗೆಯ ಬೇಸಾಯ ವೃತ್ತಿಯವರು. ಅವರು ಊರವರಿಗೆ ಕೂಡಾ ಅನೇಕ ವಿಧಗಳಿಂದ ಸಹಾಯ ಮಾಡುತ್ತಿದ್ದರು. ಅಂತೆಯೇ ಅವರಿಬ್ಬರ ಸ್ನೇಹದಲ್ಲಿ ಊರವರಿಗೆಲ್ಲ ಮೆಚ್ಚುಗೆಯಿತ್ತು. ಎಲ್ಲರೂ ಅವರನ್ನು ಜತೆ ಮಿತ್ರರು ಎಂದೇ ಹೇಳುತ್ತಿದ್ದರು. ಹೀಗಿರುವಾಗ ಯಾವುದೋ ಒಂದು ಅಲ್ಪಕಾರಣ

ಕೆ. ಓ. ಅಪ್ಪಾ

ದಿಂದ ಆ ಮಿತ್ರರ ನಡುವೆ ಅಭಿಪ್ರಾಯಭೇದವೆದ್ದಿತು. ಕ್ರಮವಾಗಿ ಅದೇ ಒಂದು ಹಗೆಯಾಗಿ ಪರಿಣಮಿಸಿತು. ಕಡೆಗೆ ಆ ಸ್ನೇಹಿತರು ಒಬ್ಬರನ್ನೊಬ್ಬರು ನೋಡುವು ದನ್ನೂ ಮಾತಾಡುವುದನ್ನೂ ಬಿಟ್ಟುಬಿಟ್ಟರು.

ಹೀಗಾದುದರಿಂದ ಅವರಿಬ್ಬರಿಗೂ ಸ್ವಲ್ಪ ನಷ್ಟ ವಾಗದಿರಲಿಲ್ಲ. ಊರವರಿಗೆ ಕೂಡಾ ಇಬ್ಬರೂ ಕೂಡಿ ಸಹಾಯ ಮಾಡಲು ಸಾಧ್ಯವಾಗಲಿಲ್ಲ. ಸ್ನೇಹಕ್ಕೆ ಸಮರ್ಥನೆಯ ಅಗತ್ಯವಿಲ್ಲದಿದ್ದರೂ ವಿರೋಧಕ್ಕೆ ಅದು ತುಂಬ ಬೇಕಾಗುತ್ತದೆ. ಆದುದರಿಂದ ಊರವರ ಹತ್ತಿರ ಅವರು ಒಬ್ಬರ ಮೇಲೊಬ್ಬರು ದೂರು ಹೇಳುವರು. ಆದರೆ ಅವರಿಗೆ ಜನರಿಂದ ಮನಃ ಪೂರ್ವಕವಾದ ಸಮರ್ಥನೆ ಸಿಗಲಿಲ್ಲ. ಒಬ್ಬರಮೇ ಲೊಬ್ಬರು ದೂರು ಹೇಳುವವರಾದುದರಿಂದ, ಮತ್ತೆ ಅವರ ಸ್ನೇಹ ಕೂಡಬಹುದೆಂಬುದಕ್ಕೆ ಯಾವ ಅವಕಾಶವೂ ಇರಲಿಲ್ಲ.

ಹೀಗಿರುವಾಗ ಗುರುಮೂರ್ತಿ ಎಂಬ ದೊಡ್ಡ ಮನುಷ್ಯನೊಬ್ಬ ಅವರೊಳಗೆ ಮೊದಲಿನ ಸ್ನೇಹವನ್ನು ಮೂಡಿಸಲು ಒಂದು ಉಪಾಯವನ್ನು ಆಲೋಚನೆ ಮಾಡಿದನು. ಅವನ ಆಲೋಚನೆಯಂತೆ ಊರಿನ ಕೊನೆಯ ಮಂಟಪದಲ್ಲಿ ಒಬ್ಬ ಯೋಗಿಯಿರುವ ವಾರ್ತೆ ಹರಡತೊಡಗಿತು.

ವಾರ್ತೆ ಹರಡಬೇಕಾದರೆ ವಿಶೇಷಗಳಿರಲೇ ಬೇಕು. ಆ ಯೋಗಿ ಎಲ್ಲರ ಮಾನಸಿಕ ಬಾಧೆಗಳನ್ನು ಹೋಗ ಲಾಡಿಸುವನಂತೆ; ಶರೀರ ವ್ಯಾಧಿಗಳನ್ನು ನಿವಾರಿಸು ತ್ತಾನಂತೆ. ಅನೇಕಮಂದಿ ಆತನ ದರ್ಶನ ಮಾಡಿ ಹಿಂದಿರುಗುತ್ತಿದ್ದಾರೆ. ರಮಾನಂದನು ಕೂಡಾ ಹೋಗಿ ಆ ಮಹಾಯೋಗಿಯನ್ನು ನೋಡಿದನು.

ಯೋಗಿ ಅವನೊಂದಿಗೆ, "ನಿನ್ನಲ್ಲಿ ದೊಡ್ಡದೊಂದು ವಿಶೇಷವಿದೆ. ನೀನು ಯಾರನ್ನು ಪ್ರೀತಿಯಿಂದ ಆಲಿಂಗನ ಮಾಡುವಿಯೋ ಅವನು ದೊಡ್ಡ ಧನಿಕ ನಾಗುತ್ತಾನೆ. ಅವನಿಂದ ನಿನಗೆ ಕೂಡಾ ಲಾಭವಾಗು



ತ್ತದೆ. ಆದರೆ ನೀನು ಆಲಿಂಗನ ಮಾಡುವ ವ್ಯಕ್ತಿ ನಿನಗೆ ಉಪಕಾರ ಮಾಡುವವನಾಗಿರಬೇಕು. ಈ ಸಂಗತಿ ಯನ್ನು ಆಲೋಚನೆ ಮಾಡಿಯೇ ನೀನು ಯಾರನ್ನಾ ದರೂ ಆಲಿಂಗನ ಮಾಡು" ಎಂದು ಹೇಳಿದನು.

ರಮಾನಂದನು ತನ್ನೊಳಗೆ ತಾನು ಯಾರನ್ನು ಆಲಿಂಗನ ಮಾಡಬಹುದೆಂದು ಆಲೋಚನೆಗೆ ತೊಡಗಿ ದನು. ಅವನ ಪರಿಚಿತರಾದ ಎಷ್ಟೋ ಜನರು ನೆನಪಿಗೆ ಬಂದರು. ತನ್ನ ಆಲಿಂಗನಕ್ಕೆ ಅರ್ಹರಾಗುವವರಾರೂ ಅವನಿಗೆ ಕಾಣಿಸಲಿಲ್ಲ. ಸೀಮಾನಂದನೊಂದಿಗೆ ತನಗೆ ವಿರೋಧ ಬಾರದಿರುತ್ತಿದ್ದರೆ, ಅವನೇ ನಿಜವಾಗಿ ತನ್ನ ಆಲಿಂಗನಕ್ಕೆ ಅರ್ಹನೆಂದು ಕಂಡಿತು.

ಇಷ್ಟರೊಳಗೆ ಸೀಮಾನಂದನು ಕೂಡಾ ಯೋಗಿ ಯನ್ನು ದರ್ಶನ ಮಾಡಲು ಹೋಗಿ ನಮಸ್ಕಾರ ಮಾಡಿದನು. ಯೋಗಿ ಅವನೊಂದಿಗೆ ಹೀಗೆ ಹೇಳಿದ: "ನಿನ್ನನ್ನು ಯಾವನಾದರೂ ಪ್ರೀತಿಯಿಂದ ಆಲಿಂಗನ ಮಾಡಿಕೊಂಡರೆ ನಿನ್ನ ಕಷ್ಟಗಳೆಲ್ಲವೂ ತೊಲಗಿ ನೀನು

ಧನವಂತನಾಗುವಿ. ಆದರೆ ನೀನು ಯಾವನನ್ನಾದರೂ ಆಲಿಂಗನ ಮಾಡಿಬಿಟ್ಟರೆ ಅವನು ನಿನ್ನ ಕಣ್ಣೆದಿರಿನಲ್ಲೇ ಸಾಯುವನು.''

ಯೋಗಿಯ ಬಾಯಿಯಿಂದ ಹೊರಟ ಮಾತು ಗಳಂತೆ ಇಬ್ಬರ ಮನಸ್ಸಿನಲ್ಲಿಯೂ ಚಕ್ರ ಸುತ್ತು ತ್ತಿದ್ದಿತು. ತನ್ನನ್ನು ಯಾರು ಆಲಿಂಗನ ಮಾಡಿಕೊಳ್ಳು ವರೋ ಎಂದು ಸೀಮಾನಂದನೂ, ತಾನು ಯಾರನ್ನು ಆಲಿಂಗಿಸಿಕೊಂಡರೆ ಚೆನ್ನಾಗಿದ್ದೀತೆಂದು ರಮಾನಂದನೂ ಕಾಲು ಸುಟ್ಟ ಬೆಕ್ಕಿನ ಹಾಗೆ ಊರೊಳಗೆ ತಿರುಗಾಡ ತೊಡಗಿದರು. ಆದುದರಿಂದ ಇಬ್ಬರೂ ಆಗಾಗ ಇದಿರುಬದಿರಾಗುತ್ತಿದ್ದರು.

ನೋಡಿ ನೋಡಿ ತಾಳ್ಮೆಗೆಟ್ಟ ಸೀಮಾನಂದನು, "ಈ ರಮಾನಂದನೊಬ್ಬ ಸತ್ತರೆ ಹೊರತು ನನ್ನನ್ನು ಆಲಿಂಗಿಸಿ ಧನಿಕನನ್ನಾಗಿ ಮಾಡುವ ಪುಣ್ಯಾತ್ಮ ಸಿಗಲಾರ.'' ಎಂದುಕೊಂಡು, ಒಂದು ದಿನ ಇದ್ದಕ್ಕಿದ್ದ ಹಾಗೆ ರಮಾನಂದನನ್ನು ಆಲಿಂಗನ ಮಾಡಿಬಿಟ್ಟನು. ತನಗೆ ಹೇಳಿದಂತೆಯೇ ಯೋಗಿ ಸೀಮಾನಂದನಿಗೂ ಹೇಳಿರಬೇಕೆಂದು ರಮಾನಂದನಿಗೆ ತೋರಿತು. ಅಂತೆಯೇ ತನಗೆ ಮೇಲಾಗಬೇಕೆಂಬ ಬಯಕೆಯಿಂದ ಸೀಮಾನಂದನು ತನ್ನನ್ನು ಆಲಿಂಗಿಸಿರಬೇಕೆಂದು ನೆನೆದು ರಮಾನಂದನು, ತಾನು ಕೂಡಾ ಪ್ರೀತಿಯಿಂದ ಅವನನ್ನು ಪ್ರತ್ಯಾಲಿಂಗ ಮಾಡಿಕೊಂಡನು.

ತರುವಾಯ ಇಬ್ಬರೂ ಮಾತಿಗೆ ತೊಡಗಲು, ಯೋಗಿ ತಮಗಿಬ್ಬರಿಗೂ ಬೇರೆ ಬೇರೆ ರೀತಿಯಾಗಿ ಹೇಳಿರುವನೆಂದು ತಿಳಿಯಿತು. ಆಗ ಸೀಮಾನಂದನಿಗೆ ಪಶ್ಚಾತ್ತಾಪವೆದ್ದಿತು. ಇಬ್ಬರೂ ಕೂಡಿ ಬೇಗ ಬೇಗನೆ ಯೋಗಿಯ ದರ್ಶನಕ್ಕೆ ಹೋದರು.

ಸೀಮಾನಂದನು ಯೋಗಿಯೊಂದಿಗೆ, "ಸ್ವಾಮಿಾ, ನಾನು ದುರ್ಬುದ್ಧಿಯಿಂದ ರಮಾನಂದನನ್ನು ಆಲಿಂಗಿಸಿ ಅವನನ್ನು ಮರಣಕ್ಕೆ ಗುರಿಪಡಿಸಿಬಿಟ್ಟೆ. ಉತ್ತಮ ಗುಣದ ಅವನನ್ನು ಹೇಗಾದರೂ ಕಾಪಾಡಿರಿ.'' ಎಂದು ಬೇಡಿಕೊಂಡನು.

"ಹೆದರಬೇಡ. ನೀನು ಮೊದಲಿನಂತೆ ಅವ ನೊಂದಿಗೆ ಸ್ನೇಹವಾಗಿದ್ದರೆ ಯಾವ ಅಪಘಾತವೂ ಬಾರದು. ನಿಮ್ಮಿಬ್ಬರನ್ನು ಮತ್ತೆ ಕೂಡಿಸಬೇಕೆಂತಲೇ ನಾನು ಹಾಗೆ ಹೇಳಿದೆ.'' ಎಂದು ಗುರುಮೂರ್ತಿ ತನ್ನ ಯೋಗಿಯ ವೇಷವನ್ನು ತೆಗೆದುಹಾಕಿದನು.

ಆಮೇಲೆ ರಮಾನಂದ ಸೀಮಾನಂದರು ಮೊದಲಿ ನಂತೆ ಅನ್ಯೋನ್ಯ ಸ್ನೇಹದಿಂದಿದ್ದರು. ತಮ್ಮ ತಮ್ಮ ಅಭಿರುಚಿ ಅಭಿಪ್ರಾಯಗಳಲ್ಲಿ ಭೇದ ಬಂದರೂ ಅದನ್ನು ದೊಡ್ಡದು ಮಾಡಲು ಹೋಗಲಿಲ್ಲ.

ಗುರುಗಳು ಹೇಳಿದ ಈ ಕಥೆಯನ್ನು ಕೇಳಿ ರೋಹಿತನು, "ಇನ್ನುಮೇಲೆ ನಾನು ಶುನಶ್ಶೇಪ ನೊಂದಿಗೆ ಸ್ನೇಹವಾಗಿರುತ್ತೇನೆ'' ಎಂದನು.





# ರತ್ನಹಾರ

ಸುಂದರಪುರವೆಂಬ ರಾಜ್ಯವನ್ನು ಮಾಧವ ಮಹಾರಾಜನು ಪಾಲಿಸಿಕೊಂಡಿದ್ದನು. ಆವನು ರಾಜ್ಯ ಪಾಲನೆಯಲ್ಲಿ ದಕ್ಷನಾಗಿ, ದಯಾವಂತನಾಗಿದ್ದನು. ಅವನಿಗೆ ಇಬ್ಬರು ರಾಣಿಯರಿದ್ದರು. ಒಂದುಸಾರಿ ಮಾಧವರಾಜನ ಆಸ್ಥಾನಕ್ಕೆ ನಗಗಳನ್ನು ವ್ಯಾಪಾರ ಮಾಡುವ ವಿದೇಶೀ ವರ್ತಕನೊಬ್ಬ ಬಂದ. ಅವನ ಹತ್ತಿರವಿದ್ದ ನಗಗಳಲ್ಲಿ ಅನರ್ಘವಾದೊಂದು ರತ್ನ ಹಾರವನ್ನು ನೋಡಿ ರಾಜನು ತುಂಬ ಮೆಚ್ಚಿ, ಅದಕ್ಕೆ ವಿಪರೀತ ಬೆಲೆಕೊಟ್ಟು ಕೊಂಡುಕೊಂಡು ತನ್ನ ಹಿರಿಯರಾಣಿಗೆ ಬಹುಮಾನವಾಗಿಕೊಟ್ಟನು. ಇದರಿಂದ ಚಿಕ್ಕರಾಣಿಗೆ ಬಹಳ ಸಂಕಟವಾಯಿತು. ಆದರೆ ತನ್ನ ಸಂಕಟವನ್ನು ಬಾಯಿತೆರೆದು ಹೇಳಲು ಸಾಧ್ಯವಿಲ್ಲದೆ ಸುಮ್ಮನಿದ್ದಳು. ಈ ಅಪೂರ್ವವಾದ ರತ್ನ ಹಾರವನ್ನು ಮಾಧವರಾಜನು ಕೊಂಡುಕೊಂಡ ವಾರ್ತೆ ವಿಶೇಷ ವಾರ್ತೆಯಂತೆ ಸುತ್ತುಮುತ್ತಿನ ದೇಶಗಳಿಗೆ ವ್ಯಾಪಿಸಿತು.

ಮಾಧವರಾಜನಿಗೆ ತ್ರಿನಾಥನೆಂಬ ಮಂತ್ರಿಯಿದ್ದನು. ಅವನಿಗೆ ಏಕ ಮಾತ್ರಳಾದ ಕುಮಾರಿಯಿದ್ದಳು. ಅವಳು ಮೂಕಳಾದುದರಿಂದ ಯುಕ್ತವಯಸ್ಸು ಬಂದರೂ ಮದುವೆಯಾಗಿರಲಿಲ್ಲ. ಇದು ಮಂತ್ರಿಗೆ ಬಹಳ ಚಿಂತೆಯನ್ನೂ ಭಾರವನ್ನೂ ಭಯವನ್ನೂ ಉಂಟು ಮಾಡುತಿತ್ತು.

ಹೀಗಿರುವಾಗ ನೆರೆದೇಶದ ಮಂತ್ರಿ ಸ್ವಲ್ಪ ಪರಿವಾರದೊಂದಿಗೆ, ಅಕಸ್ಮಾತ್ತಾಗಿ ತ್ರಿನಾಥನ ಮನೆಗೆ ಬಂದು, ಏಕಾಂತದಲ್ಲಿ ತ್ರಿನಾಥನೊಂದಿಗೆ, "ನಾನು ಒಂದು ಷರತ್ತಿನ ಮೇಲೆ ನಿಮ್ಮ ಮಗಳನ್ನು ನನ್ನ ಮಗನಿಗೆ ಕೇಳಲು ಬಂದಿದ್ದೇನೆ. ಆ ಷರತ್ತು ಏನೆಂದರೆ ಹಿರಿಯರಾಣಿಯ ಹೊಸ ರತ್ನಹಾರವನ್ನು ನಮಗೆ ಕೊಡಬೇಕು. ಏನನ್ನುವಿರಿ?" ಎಂದನು.

ತ್ರಿನಾಥನು ಬೆರಗಾಗಿ, "ಅದು ಹೇಗೆ ಸಾಧ್ಯವಾದೀತು? ರಾಣಿಯ ರತ್ನಹಾರ ನನಗೆ ಹೇಗೆ ಸಿಗುತ್ತದೆ? ಕೇಳಿ ಪಡೆಯುವುದಾದರೂ ಸಾಧ್ಯವೆ? ತರವೆ?" ಎಂದನು.

"ಅದೆಲ್ಲಾ ನನಗೆ ಗೊತ್ತಿಲ್ಲ. ಆ ರತ್ನಹಾರ ಕೊಡದಿದ್ದರೆ ನಿಮ್ಮ ಮಗಳು ನಮಗೆ ಬೇಡ. ಅಷ್ಟೇ ಹೇಳಬಲ್ಲೆ" ಎಂದು ನೆರೆದೇಶದ ಮಂತ್ರಿ ಹಿಂದಿರುಗಿ ಹೋಗಲು ತಯಾರಾದ. ತ್ರಿನಾಥನು ರಾಜನ ಮೇಲೆ ತುಂಬ ವಿಶ್ವಾಸಿಕನಾದ ಮಂತ್ರಿಯಾಗಿದ್ದ. ಆ ದಿನ

ಟಿ. ಮನೋಹರ



ರಾತ್ರಿ ಅವನು ತನ್ನ ಹೆಂಡತಿಯೊಂದಿಗೆ, ನೆರೆದೇಶದ ಮಂತ್ರಿಯ ಸಮಾಚಾರವನ್ನು ಹೇಳುತ್ತ, "ಆ ಮಂತ್ರಿ ಕೇವಲ ಈ ರತ್ನಹಾರಕ್ಕಾಗಿಯೇ ನಮ್ಮ ಮೂಕ ಮಗಳನ್ನು ತನ್ನ ಮಗನಿಗೆ ತಂದುಕೊಳ್ಳುತ್ತೇನೆನ್ನುತ್ತಾನೆ. ನಮ್ಮ ಮಗಳಿಗೆ ಮದುವೆಯಾಗದಿದ್ದರೂ ಚಿಂತೆಯಿಲ್ಲ. ನಾನು ಮಾತ್ರ ರಾಜನಿಗೆ ದ್ರೋಹ ಮಾಡಲಾರೆ." ಎಂದ.

ತ್ರಿನಾಥನು ತನ್ನ ಹೆಂಡತಿಯೊಂದಿಗೆ ಈ ವಿಷಯ ಮಾತಾಡುತ್ತಿದ್ದ ಸಮಯದಲ್ಲಿ ಮಾಧವರಾಜನು ವೇಷ ಬದಲಾಯಿಸಿಕೊಂಡು ನಗರ ಸಂಚಾರ ಮಾಡುತ್ತ ಅಲ್ಲಿಗೇ ಬಂದಿದ್ದ. ಮರೆಯಲ್ಲಿದ್ದು ತನ್ನ ಮಂತ್ರಿಯ ಮಾತುಗಳನ್ನು ಕೇಳಿ, ಹೇಗಾದರೂ ಈ ಮಂತ್ರಿಯ ಮೂಕ ಮಗಳಿಗೆ ಮದುವೆ ಮಾಡಿಸಬೇಕೆಂದು ಅವನಿಗೆ ತೋರಿತು. ಅಂತಲೇ ರಾಜನು ಕೂಡಲೇ ಬಾಗಿಲು ತೆರೆಯಿಸಿ ಮಂತ್ರಿಯ ಮನೆಯೊಳಗೆ ಪ್ರವೇಶಮಾಡಿದನು.

ಹೊತ್ತಲ್ಲದ ಹೊತ್ತಿನಲ್ಲಿ ಮನೆಯೊಳಗೆ ಪ್ರವೇಶಿಸಿದ ಯಾವನೋ ಅಪರಿಚಿತನನ್ನು ನೋಡಿ ತ್ರಿನಾಥನು ಆಶ್ಚರ್ಯಪಟ್ಟು, ರಾಜನೆಂದು ತಿಳಿಯದೆ, "ಯಾರು ನೀನು? ಇದೇನು ನಿನ್ನ ಅತಿಕ್ರಮ ಪ್ರವೇಶ?" ಎಂದು ಗದರಿಸಿ ಕೇಳಿದ.

"ನಿಜ ಹೇಳಬೇಕೆಂದರೆ ನಾನೊಬ್ಬ ದೊಡ್ಡ ಕಳ್ಳ. ನಿಮ್ಮ ಮನೆಯಲ್ಲಿ ಕಳ್ಳತನ ಮಾಡೋಣವೆಂದು ಬಂದಿದ್ದೇನೆ. ಆದರೆ ಹೊರಗೆ ನಿಂತು ನೀವು ಮಾತಾಡಿದುದನ್ನು ಕೇಳಿದ ಮೇಲೆ, ನೀವು ನಿಮ್ಮ ಮಗಳ ವಿಷಯವಾಗಿ ಎಷ್ಟು ಚಿಂತೆಯಲ್ಲಿರುವಿರೆಂದು ಅರ್ಥವಾಯಿತು. ನನ್ನ ಮಾತನ್ನು ಕೇಳಿರಿ. ನೀವು ಬಂದಿರುವ ಈ ಸಂಬಂಧವನ್ನು ಜಾರಿಸಿಬಿಡಬಾರದು. ನಾನು ಹೇಗಾದರೂ ರಾಣಿಯ ರತ್ನಹಾರವನ್ನು ತಂದು ನಿಮಗೆ ಕೊಟ್ಟುಬಿಡುತ್ತೇನೆ." ಎಂದ ರಾಜ.

"ಛೀ! ಛೀ! ಇದಕ್ಕೆ ನಾನು ಎಷ್ಟು ಮಾತ್ರಕ್ಕೂ ಒಪ್ಪಲಾರೆ." ಎಂದ ತ್ರಿನಾಥ.

"ಅವಸರಪಡಬೇಡಿ. ಕಳ್ಳತನ ಮಾಡುವುದು ನೀವಲ್ಲ, ನಾನು. ಅದು ಕೂಡಾ ನಿಮ್ಮ ಒಳಿತಿಗಾಗಿ ಮಾಡುತ್ತೇನೆಯೇ ಹೊರತು, ಇದರಲ್ಲಿ ನನ್ನ ಸ್ವಾರ್ಥ ಸ್ವಲ್ಪವೂ ಇಲ್ಲ." ಎಂದ ರಾಜ.

ಆಗ ತ್ರಿನಾಥನ ಹೆಂಡತಿ ಗಂಡನನ್ನು ನೋಡಿ, "ಒಪ್ಪಿಕೊಳ್ಳೀ ಅಂದ್ರೆ. ಮಗಳಿಗೊಂದು ಮದುವೆಯಾಗಿ ಹೋದ ಮೇಲೆ ನಮ್ಮ ರಾಜರ ಹತ್ತಿರ ನಾವೇ ಸತ್ಯಸಂಗತಿ ಹೇಳಿ ಶಿಕ್ಷೆ ಅನುಭವಿಸೋಣ" ಎಂದಳು. ಕಡೆಗೆ ತ್ರಿನಾಥನು ಅರೆ ಮನಸ್ಸಿನಿಂದ ಕಳ್ಳನ ಅಭಿಪ್ರಾಯಕ್ಕೆ ಒಪ್ಪಿದ.

ಮರುದಿನ ರಾಜನು ಸಮರ್ಥನಾದ ಸ್ವರ್ಣಕಾರನನ್ನು ಅರಮನೆಗೆ ಕರೆಯಿಸಿ, ಅವನನ್ನು ಒಂದು ರಹಸ್ಯ ಮಂದಿರದಲ್ಲಿ ಕೂಡಿಸಿ. ರಾಣಿಯ ರತ್ನಹಾರವನ್ನೂ ಕೆಲಸವನ್ನೂ ಕೊಟ್ಟನು. ಆ ಸ್ವರ್ಣಕಾರನು ರಾಜನ ಕೋರಿಕೆಯಂತೆ ಅದೇ ರತ್ನಹಾರವನ್ನು

ಹೋಲುವ ನಕಲೀ ರತ್ನಹಾರವನ್ನು ಒಂದು ವಾರದಲ್ಲಿ ಮಾಡಿಕೊಟ್ಟನು. ರಾಜನು ಅವನಿಗೆ ಒಳ್ಳೆಯ ಬಹುಮಾನವನ್ನು ಕೊಟ್ಟು ಕಳುಹಿಸಿದನು. ತರುವಾಯ ರಾಜನು ವೇಷಬದಲಾಯಿಸಿಕೊಂಡು ಮಂತ್ರಿಯ ಮನೆಗೆ ಹೋಗಿ ನಕಲೀ ಹಾರವನ್ನು ಮಂತ್ರಿಯ ಕೈಗೆ ಹಾಕಿ "ನಿಮ್ಮ ಮಗಳ ಮದುವೆ ಮುಗಿಸಿರಿ" ಎಂದ.

ಆಮೇಲೆ ನೆರೆದೇಶದ ಮಂತ್ರಿಯ ಮಗನೊಂದಿಗೆ ತ್ರಿನಾಥ ಮಂತ್ರಿಯ ಮೂಕ ಮಗಳ ಮದುವೆ ನಿರ್ವಿಘ್ನವಾಗಿ ನಡೆಯಿತು. ಮಾಧವರಾಜನು ಸ್ವಯಂ ಮದುವೆಗೆ ಹಾಜರಾಗಿ ವಧೂವರರನ್ನು ಕಾಣಿಕೆಗಳೊಂದಿಗೆ ಆಶೀರ್ವದಿಸಿದನು. ತಾನು ಒಂದು ಹುಡುಗಿಯ ಜೀವಿತವನ್ನು ದಡ ಸೇರಿಸಿದೆನೆಂಬ ಸಂತೋಷದಿಂದ ರಾಜನು ತನ್ನ ಭವನಕ್ಕೆ ಹಿಂದಿರುಗಿದನು.

ಹಿರಿಯರಾಣಿ ಅವನಬಳಿಗೆ ಬಂದು ತನ್ನ ರತ್ನಹಾರವನ್ನು ತೋರಿಸುತ್ತ "ನೋಡಿದಿರಾ? ಯಾಕೋ ಈ ರತ್ನಹಾರದಲ್ಲಿ ಮೊದಲಿದ್ದ ಹೊಳಪು ಕಾಣುವುದಿಲ್ಲ." ಎಂದಳು.

ರಾಜನು ಅದನ್ನು ತನ್ನ ಕೈಯಲ್ಲಿ ಎತ್ತಿಕೊಂಡ ಮರುಕ್ಷಣವೇ ಅದು ನಕಲೀ ಹಾರವೆಂದು ತಿಳಿದುಕೊಂಡನು. ತಾನೇ ತಪ್ಪಾಗಿ ನಕಲೀ ಹಾರಕ್ಕೆ ಬದಲು ಅಸಲು ಹಾರವನ್ನು ಮಂತ್ರಿಗೆ ಕೊಟ್ಟಿರಬೇಕೆಂಬ ಅನುಮಾನವಾಯಿತು. ಆದುದರಿಂದ ಅವನು ಆ ರಾತ್ರಿ ಕಳ್ಳನ ವೇಷ ಹಾಕಿಕೊಂಡು, ತನ್ನ ಕೆಲವಂದಿ ವೀರರಿಗೂ ಕಳ್ಳರ ವೇಷ ಹಾಕಿಸಿ, ನೆರೆದೇಶದ ಮಂತ್ರಿ ಪರಿವಾರದವರಿರುವ ಬಿಡದಿಯಮೇಲೆ ಆಕಸ್ಮಾತ್ತಾಗಿ ದಾಳಿ ಮಾಡಿದನು.

ಆ ದಾಳಿಯಲ್ಲಿ ದೊರಕಿದ ನಗಗಳ ಗುಂಪಿನಲ್ಲಿ ಪರೀಕ್ಷಿಸಿದಾಗ ಆ ರತ್ನಹಾರವೂ ಸಿಕ್ಕಿತು. ಆದರೆ ಅದು ಕೂಡಾ ನಕಲೀ ಹಾರವೇ. ಇದೇನು ವಿಚಿತ್ರವೋ!



ರಾಜನಿಗೊಂದೂ ಅರ್ಥವಾಗಲಿಲ್ಲ. ಮರುದಿನ ಬೆಳಿಗ್ಗೆ ತ್ರಿನಾಥನು ರಾಜನ ಬಳಿಗೆ ಬಂದು, "ಮಹಾರಾಜರೇ, ನಮ್ಮ ಸಂಬಂಧಿಕರ ಬಿಡದಿಯ ಮೇಲೆ ನಿನ್ನೆ ರಾತ್ರಿ ಕಳ್ಳರು ಬಿದ್ದು ನಗನಟ್ಟುಗಳನ್ನೆಲ್ಲಾ ದೋಚಿಕೊಂಡರಂತೆ. ಇದಕ್ಕಿಂತಲೂ ದಾರುಣವಾದ ವಿಷಯ ಅರಿಕೆ ಮಾಡಬೇಕಾಗಿ ಬಂದಿದೆ. ಒಬ್ಬ ದೊಡ್ಡ ಕಳ್ಳನ ಮುಖಾಂತರವಾಗಿ ನಾನು ಮಹಾರಾಣಿಯವರ ರತ್ನಹಾರವನ್ನು ತರಿಸಿ, ಅದನ್ನು ನನ್ನ ಅಳಿಯನಿಗೆ ವರದಕ್ಷಿಣೆಯಾಗಿ ಕೊಟ್ಟೆ. ಆ ದ್ರೋಹಕ್ಕೆ ನನಗೆ ಶಿಕ್ಷೆಯಾಗಬೇಕು. ಯಾವ ಶಿಕ್ಷೆಯನ್ನಾದರೂ ಕೊಡಿರಿ" ಎಂದನು.

ರಾಜನು ತ್ರಿನಾಥನೊಂದಿಗೆ, "ನಿಮ್ಮಿಂದ ಯಾವ ಕಳ್ಳತನವೂ ನಡೆಯಲಿಲ್ಲ. ನಿಮ್ಮ ಸಂಬಂಧಿಕರು ಕಳೆದುಕೊಂಡುದನ್ನೆಲ್ಲಾ ಮತ್ತೆ ಅವರಿಗೆ ಸಿಗುವ ಹಾಗೆ ಮಾಡುತ್ತೇನೆ. ಚಿಂತಿಸಬೇಡಿ" ಎಂದು ಸಮಾಧಾನ ಹೇಳಿ ಕಳುಹಿಸಿದನು.

ತರುವಾಯ ರಾಜನು ಸ್ವರ್ಣಕಾರನನ್ನು ಕರೆಯಿಸಿ, "ನೀನು ನನಗೆ ನಕಲೀ ರತ್ನಹಾರ ಮಾಡಿಕೊಡುವಾಗ ಅಸಲು ರತ್ನಹಾರ ನನಗೆ ಕೊಡಲಿಲ್ಲ. ಮತ್ತೊಂದು ನಕಲೀ ರತ್ನಹಾರವನ್ನೇ ಕೊಟ್ಟಿರುವಿ. ಯಾಕೆ ಹೀಗೆ ಮಾಡಿದಿ ಎಂಬ ನಿಜ ಸಂಗತಿ ಹೇಳದೆ ಹೋದರೆ ನಿನ್ನನ್ನು ಶೂಲಕ್ಕೇರಿಸುತ್ತೇನೆ. ಸತ್ಯ ಹೇಳಿದರೆ ಕ್ಷಮೆ ಸಿಕ್ಕೀತು" ಎಂದನು.

ಸ್ವರ್ಣಕಾರನು ರಾಜನ ಕಾಲಿಗೆ ಬಿದ್ದು, "ನನ್ನನ್ನು ಕ್ಷಮಿಸಬೇಕು ಮಹಾಪ್ರಭುಗಳೇ. ನಾನು ಎರಡು ನಕಲೀ ರತ್ನಹಾರಗಳನ್ನು ಮಾಡಿದ್ದು ನಿಜವೇ. ಅಂತಃಪುರದಿಂದ ಮಂಜರಿ ಎಂಬ ದಾಸಿ ಬಂದು ಚಿಕ್ಕರಾಣಿಗಾಗಿ ಇನ್ನೊಂದು ನಕಲೀ ರತ್ನಹಾರ ಬೇಕೆಂದು ಹೇಳಿ, ಈ ವಿಷಯ ರಹಸ್ಯವಾಗಿರಬೇಕೆಂದು ಚೀಲ ತುಂಬಾ ಹಣ ಕೊಟ್ಟಳು. ತರುವಾಯ ಅವಳು ಮೂರು ಹಾರಗಳನ್ನೂ ಇಟ್ಟಿರುವ ಪೆಟ್ಟಿಗೆಯಿಂದ ನಕಲೀ ಹಾರವನ್ನೇ ತೆಗೆದುಕೊಂಡು ಹೋದಳೆಂದು ತಿಳಿದೆನು. ಉಳಿದ ಎರಡು ಹಾರಗಳನ್ನೂ ತಮಗೆ ಒಪ್ಪಿಸಿದ್ದೇನೆ. ಇದೇ ನಿಜ ಸಂಗತಿ" ಎಂದನು.

ರಾಜನು ಸ್ವರ್ಣಕಾರನನ್ನು ಕಳುಹಿಸಿ, ಮಂಜರಿ ಎಂಬ ಚಿಕ್ಕರಾಣಿಯ ದಾಸಿಯನ್ನು ಕರೆಯಿಸಿ, ನಿಜ ಸಂಗತಿಯನ್ನು ಅವಳ ಬಾಯಿಯಿಂದ ಹೊರಡಿಸಿದನು. ಅವಳು ಪ್ರಾಣಭೀತಿಯಿಂದ ನಡುಗುತ್ತ, ತಾನು ಸ್ವರ್ಣಕಾರನ ಕಣ್ಣು ತಪ್ಪಿಸಿ ಅಸಲು ಹಾರವನ್ನು ಚಿಕ್ಕರಾಣಿಗೆ ಕೊಟ್ಟುದನ್ನೂ ಹೇಳಿದಳು. ರಾಜನು ಕೋಪದಿಂದ ಚಿಕ್ಕರಾಣಿಯನ್ನು ಕರೆಯಿಸಿ, "ಈ ತಂತ್ರವೆಲ್ಲಾ ಏನಿದು?" ಎಂದು ಕೇಳಿದನು.

"ಹೌದು. ಸ್ತ್ರೀಯಾದವಳಿಗೆ ನಗಗಳ ಮೇಲೆ, ಸೀರೆಗಳ ಮೇಲೆ ಮೋಹವಿರುವ ಸಂಗತಿ ನಿಮಗೆ ಗೊತ್ತಿಲ್ಲವೇನು? ನೀವು ಅಕ್ಕಯ್ಯನಿಗೆ ಅಷ್ಟು ಬೆಲೆ ಬಾಳುವ ಹಾರವನ್ನು ಕೊಟ್ಟು ನನಗೆ ಮಾತ್ರ ಏನೂ ಇಲ್ಲದಂತೆ ಮಾಡಿದಿರಿ. ಆ ರತ್ನಹಾರವನ್ನು ಧರಿಸಬೇಕೆಂದು ನನಗೆ ಮಾತ್ರ ಆಶೆಯಿರದೆ? ನಾನು ಬಾಯಿ ತೆರೆದು ಕೇಳುತ್ತೇನೆಯೆ? ನೀವು ನನ್ನ ಮನಸ್ಸನ್ನು ಅಷ್ಟಾದರೂ ತಿಳಿದಿರಬೇಡವೆ? ಆದ್ದರಿಂದಲೇ ನನ್ನ ಮನಸ್ಸು ಕೇಳದೆ ಸಣ್ಣ ತಂತ್ರ ಮಾಡಿ ಆ ಹಾರ ನನ್ನ ಕೈಗೆ ಬರಿಸಿಕೊಂಡೆ. ನಾನು ಮಾಡಿದ್ದು ತಪ್ಪು, ನಿಜ. ನೀವು ದೊಡ್ಡ ಮನಸ್ಸಿನಿಂದ ಕ್ಷಮಿಸಬೇಕು." ಎಂದಳು ಚಿಕ್ಕರಾಣಿ.

ರಾಜನು ವಿವೇಕವಂತನಾದುದರಿಂದ ತನ್ನ ತಪ್ಪನ್ನು ಒಪ್ಪಿಕೊಂಡು, ಆ ಸ್ವರ್ಣಕಾರನನ್ನೇ ಇಟ್ಟುಕೊಂಡು ಅಂತಹುದೇ ಇನ್ನೊಂದು ರತ್ನಹಾರವನ್ನು ಮಾಡಿಸಿ ಕೊಟ್ಟನು. ಆಮೇಲೆ ರಾಜನು ಇಬ್ಬರು ರಾಣಿಯರಲ್ಲಿಯೂ ಸ್ವಲ್ಪಕೂಡ ಪಕ್ಷಪಾತವಿಲ್ಲದೆ ಸರಿಯಾಗಿ ನೋಡಿಕೊಳ್ಳುತ್ತಿದ್ದನು.



# ನ್ಯಾಯವಾದ ಕೂಲಿ

ರಾಮಯ್ಯನ ಹತ್ತಿರ ನಾಲ್ಕು ಗಜ ಚಚ್ಚೌಕವಾದೊಂದು ಹಾಸುಗಲ್ಲಿದ್ದಿತು. ಅದನ್ನು ನಾಲ್ಕು ತುಂಡುಗಳನ್ನಾಗಿ ಮಾಡಲು ವೆಂಕನೆಂಬ ಕಲ್ಕುಟಿಗನನ್ನು ನಿಯಮಿಸಿದನು. ಅವನು ನಾಲ್ಕು ರೂಪಾಯಿ ಕೂಲಿಗೆ ಆ ಕೆಲಸ ಒಪ್ಪಿದ.

ವೆಂಕ ಇಡೀ ದಿನ ಕೆಲಸ ಮಾಡಿ ದೊಡ್ಡ ಕಲ್ಲಿನಿಂದ ಒಂದು ತುಂಡನ್ನು ಮಾತ್ರ ತೆಗೆದನು. ಮರುದಿನ ಏನೋ ಕಾರಣದಿಂದ ಅವನು ಕೆಲಸಕ್ಕೆ ಬಾರದಿರಲು, ರಾಮಯ್ಯ ಬಿರುಮನೆಂಬ ಇನ್ನೊಬ್ಬ ಕೆಲಸಗಾರನನ್ನು ಗೊತ್ತು ಮಾಡಿದನು.

ಬಿರುಮ ಇಡೀ ದಿನ ಕೆಲಸ ಮಾಡಿ ಉಳಿದ ಮೂರು ತುಂಡುಗಳನ್ನೂ ಮಾಡಿಕೊಟ್ಟನು.

ಅನಂತರ ರಾಮಯ್ಯ ವೆಂಕನಿಗೆ ಒಂದು ರೂಪಾಯಿಯನ್ನೂ, ಬಿರುಮನಿಗೆ ಮೂರು ರೂಪಾಯಿಗಳನ್ನೂ ಕೊಡಲು ನೋಡಿದನು.

ಆಗ ವೆಂಕ, " ನಾವಿಬ್ಬರೂ ಒಂದೊಂದುದಿನ ಕೆಲಸ ಮಾಡಿದ್ದೇವೆ. ಒಬ್ಬೊಬ್ಬರಿಗೂ ಎರಡೆರಡು ರೂಪಾಯಿ ಕೊಡಬೇಕು " ಎಂದನು.

" ಅದು ಸರಿಯಲ್ಲ. ಬಿರುಮ ಮೂರು ತುಂಡು ತೆಗೆದಿದ್ದಾನೆ. ನೀನು ತೆಗೆದದ್ದು ಒಂದೇ ತುಂಡು " ಎಂದ ರಾಮಯ್ಯ.

ಆಗ ದಾರಿಯಲ್ಲಿ ಹೋಗುವ ದೊಡ್ಡ ಮನುಷ್ಯನೊಬ್ಬ, ಈ ವಿಷಯ ತಿಳಿದು, " ರಾಮಯ್ಯಾ, ಇಬ್ಬರೂ ಸಮಾನವಾಗಿಯೇ ಕೆಲಸ ಮಾಡಿದ್ದಾರೆ. ಒಂದು ಮೂಲೆಯ ತುಂಡು ತೆಗೆಯಲು ಒಬ್ಬನಿಗೆ ಇಡೀದಿನ ಬೇಕಾದರೆ, ಇನ್ನೊಂದು ಮೂಲೆಯ ತುಂಡು ಇನ್ನೊಬ್ಬ ತೆಗೆದ. ಪ್ರಾರಂಭದ ಕಷ್ಟವೇ ಉಳಿದ ತುಂಡುಗಳ ಸುಲಭಕ್ಕೆ ಕಾರಣ. ಮೊದಲನೇಯವನಾದರೂ ಹಾಗೆಯೇ ಮಾಡುತ್ತಿದ್ದ. ಆದ್ದರಿಂದ ಇಬ್ಬರಿಗೂ ಸಮಾನವಾಗಿಯೇ ಕೂಲಿ ಕೊಡಬೇಕು " ಎಂದ.

ಈಗ ರಾಮಯ್ಯನಿಗೆ ವಿಷಯವು ಅರ್ಥವಾಗಿ ಇಬ್ಬರಿಗೂ ಎರಡೆರಡು ರೂಪಾಯಿ ಕೊಟ್ಟ.





# ಬಡ ಬಸವ

ಒಂದು ಊರಿನಲ್ಲಿ ಬಸವನೆಂಬ ಬಡ ರೈತನಿದ್ದ. ಅವನು ಏನೋ ತಾಪತ್ರಯಗಳಿಂದ ತನಗಿರುವ ಒಂದು ಎಕರೆ ಹೊಲವನ್ನು, ಒತ್ತೆಯಿಟ್ಟು ತುಂಬ ಸಾಲ ತೆಗೆದುಕೊಂಡಿದ್ದ. ಬಡ್ಡಿ ಕೂಡಾ ಕೊಡಲಿಕ್ಕಾಗದೆ ಸಾಲ ತುಂಬಿಹೋಯಿತು. ಕಡೆಗೆ ಅವನು ತನ್ನ ಹೊಲವನ್ನೆಲ್ಲಾ ಸಾಲ ಪಡೆದ ಜಗನ್ನಾಥ ಶೆಟ್ಟಿಗೇ ಕೊಟ್ಟುಬಿಡಬೇಕಾಯಿತು.

ಈ ಸ್ಥಿತಿಯಲ್ಲಿ ಬಸವನಿಗೆ ಒಳ್ಳೆಯ ಹಾಲು ಕೊಡುವ ಉತ್ತಮ ಜಾತಿಯ ಒಂದೇ ಒಂದು ಆಕಳಿನ ಹೊರತು ಬೇರೆ ಯಾವ ಆಧಾರವೂ ಇರಲಿಲ್ಲ.

ಅವನು ತನ್ನ ಆಕಳಿನ ಹಾಲನ್ನು ಜಗನ್ನಾಥ ಶೆಟ್ಟಿಗೇ ಮಾರಿ, ಸಿಕ್ಕಿದ ಹಣದಿಂದ ಆ ಶೆಟ್ಟಿಯ ಅಂಗಡಿಯಿಂದಲೇ ಹೊಟ್ಟೆಗೆ ಬೇಕಾದ ಜೀನಸುಗಳನ್ನು ಕೊಂಡುಕೊಂಡು ಹೇಗಾದರೂ ದಿನ ಕಳೆಯತೊಡಗಿದನು.

ಜಗನ್ನಾಥ ಶೆಟ್ಟಿಗೆ ಬಸವನ ಆಕಳಿನ ಮೇಲೆ ಕಣ್ಣಿತ್ತು. ಅವನ ಆಕಳನ್ನು ಕೂಡಾ ತಾನೇ ಕೊಂಡು ಕೊಂಡು ಬಿಟ್ಟರೆ, ಬಸವನಿಗೆ ತನ್ನ ಅಂಗಡಿಯಿಂದ ಜೀನಸುಗಳನ್ನು ಕೊಡುವ ಅಗತ್ಯ ತಪ್ಪುವುದೆಂದು ಜಗನ್ನಾಥಶೆಟ್ಟಿ ಲೆಕ್ಕ ಹಾಕಿಕೊಂಡಿದ್ದ. ಬಸವನ ಸೊತ್ತನ್ನೆಲ್ಲ ದಕ್ಕಿಸಿಕೊಂಡುದರಿಂದ ಅವನ ಸಂಬಂಧ ಪೂರ್ತಿ ಕಡಿದುಕೊಳ್ಳಬೇಕೆಂದು ಜಗನ್ನಾಥ ಶೆಟ್ಟಿಗೆ ತೋರುತ್ತಿತ್ತು.

ಒಂದುದಿನ ಜಡಿ ಮಳೆ ಸುರಿಯಿತು. ಬಸವನು ತನ್ನ ಆಕಳನ್ನು ಮೇಯಲು ಹೊರಗೆ ಬಿಡಲು ಸಾಧ್ಯವಾಗಲಿಲ್ಲ. ದಿನವಿಡೀ ಅದನ್ನು ಹಟ್ಟಿಯೊಳಗೇ ಕಟ್ಟಿಟ್ಟ. ಅದಕ್ಕೆ ಹಾಕಲು ಒಣಹುಲ್ಲು ಕೂಡಾ ಅವನ ಹತ್ತಿರ ಇರಲಿಲ್ಲ. ಮೇವು ಹಾಕದುದರಿಂದ ಮರುದಿನ ಅದು ಹಾಲು ಕೊಡಲಾರದೇನೋ ಎಂದು ಹೆದರುತ್ತ ಬಸವನಿಗೆ ರಾತ್ರಿ ನಿದ್ದೆ ಕೂಡ ಬರಲಿಲ್ಲ. ಬಂದರೂ ಅರೆನಿದ್ದೆ ಮಾತ್ರ. ತನ್ನ ಹೊಟ್ಟೆಗಿಂತ ಆಕಳಿನ ಹೊಟ್ಟೆಯೇ ಅವನಿಗೆ ಬಗೆಹರಿಯದ ಸಮಸ್ಯೆಯಾಯಿತು.

ಹಗಲಿಡೀ ಮೇವು ಇಲ್ಲದುದರಿಂದ ಅವನ ಆಕಳು ರಾತ್ರಿಯಲ್ಲಿ ಹಗ್ಗ ಕಡಿದುಕೊಂಡು ಅಲ್ಲಿ ಇಲ್ಲಿ ಸುತ್ತಿ ಜಗನ್ನಾಥಶೆಟ್ಟಿಯ ಹೊಲಕ್ಕೆ ಹೋಗಿ ಮೇಯತೊಡಗಿತು. ಇದಾವುದೂ ಬಸವನಿಗೆ ಗೊತ್ತಾಗಲಿಲ್ಲ. ಮರುದಿನ ಬೆಳಿಗ್ಗೆ ಜಗನ್ನಾಥಶೆಟ್ಟಿ ನಾಲ್ಕು ಮಂದಿ

ಪಿ. ಆರ್. ಸುಧಾ

ದೊಡ್ಡ ಮನುಷ್ಯರನ್ನು ಜತೆಗೆ ಕರೆದುಕೊಂಡು ಬಸವನ ಮನೆಗೆ ಬಂದು, "ನಿನ್ನ ದನ ನನ್ನ ಹೊಲದ ಪೈರನ್ನೆಲ್ಲಾ ಮೇದು ಹಾಳು ಮಾಡಿತು. ಕಷ್ಟಪಟ್ಟು ಬೆಳೆಸಿದ್ದೆಲ್ಲಾ ನಷ್ಟವಾಯಿತು. ಇದಕ್ಕೆಲ್ಲಾ ನಿನ್ನ ಅಲಕ್ಷ್ಯವೇ ಕಾರಣ. ಇದಕ್ಕೇನು ಹೇಳುವೆ?" ಎಂದು ಜೋರು ಮಾಡಿದನು.

ಬಸವ ಏನೂ ತೋರದೆ ದೊಡ್ಡ ಮನುಷ್ಯರ ಮುಖಗಳನ್ನು ನೋಡಿದನು. "ಇವರು ಹೇಳುವುದು ನಿಜವೇ" ಎಂದರು ಆ ದೊಡ್ಡ ಮನುಷ್ಯರು. "ಅಲ್ಪಸ್ವಲ್ಪ ನಷ್ಟವಾಗುತ್ತಿದ್ದರೆ ಏನೋ ಹೋಗಲಿ ಎಂದು ಬಿಟ್ಟುಬಿಡಬಹುದಿತ್ತು. ಒಂದೆರಡಲ್ಲ, ಇನ್ನೂರು ವರಹಗಳ ನಷ್ಟವಾಯಿತು" ಎಂದ ಜಗನ್ನಾಥಶೆಟ್ಟಿ.

"ಹೆಚ್ಚುರಗಳೆ ಬೇಡಪ್ಪಾ. ನಿನ್ನ ದನವನ್ನು ಜಗನ್ನಾಥಶೆಟ್ಟರಿಗೆ ಕೊಟ್ಟುಬಿಟ್ಟರೆ ಅವರಿಗಾದ ನಷ್ಟಕ್ಕೆ ಸರಿ ಹೋಗುತ್ತದ." ಎಂದು ದೊಡ್ಡ ಮನುಷ್ಯರು ಬಸವನೊಂದಿಗೆ ಹೇಳಿದರು. ಜಗನ್ನಾಥಶೆಟ್ಟಿ ಈ ಆಲೋಚನೆ ಅಮಲು ನಡೆಸಲಿಕ್ಕಾಗಿಯೇ ಆ ದೊಡ್ಡ ಮನುಷ್ಯರೊಂದಿಗೆ ಬಂದಿದ್ದ.

ತನ್ನ ಜೀವನ ಸರ್ವಸ್ವವಾದ ಆಕಳನ್ನು ಶೆಟ್ಟರಿಗೆ ಕೊಟ್ಟುಬಿಟ್ಟರೆ, ತನಗೆ ನಿತ್ಯೋಪವಾಸವೇ ಗತಿಯೆಂದು ಬಸವ ಹೆದರಿದ. ಕಡೆಗೆ ಧೈರ್ಯದಿಂದ, "ದನವನ್ನು ಕೊಡಲು ಸಾಧ್ಯವಿಲ್ಲ" ಎಂದುಬಿಟ್ಟ.

ಅಷ್ಟಕ್ಕೆ ಬಿಡದೆ ಜಗನ್ನಾಥಶೆಟ್ಟಿ ಗ್ರಾಮಾಧಿಕಾರಿಯಬಳಿಗೆ ಹೋಗಿ ಫಿರ್ಯಾದಿ ಮಾಡಿದ. ಗ್ರಾಮಾಧಿಕಾರಿ ನಡೆದ ಸಂಗತಿಯನ್ನೆಲ್ಲ ಪರಿಶೀಲನೆ ಮಾಡಿ, ಬಸವನೊಂದಿಗೆ, "ನಿನ್ನ ಅಜಾಗ್ರತೆಯಿಂದಲೇ ಜಗನ್ನಾಥಶೆಟ್ಟಿಗಳ ಪೈರು ಹಾಳಾಯಿತು. ನಷ್ಟಪರಿಹಾರಕ್ಕಾಗಿ ನಿನ್ನ ಹತ್ತಿರ ಹಣವಿಲ್ಲದ್ದರಿಂದ, ನಿನ್ನ ದನವನ್ನು ಅವರಿಗೆ ಕೊಡಬೇಕಾದುದೇ ನ್ಯಾಯ." ಎಂದನು.

ಊರೊಳಗಿನ ಬೇರೆ ದೊಡ್ಡ ಮನುಷ್ಯರು ಕೂಡಾ ಈ ತೀರ್ಪು ನ್ಯಾಯವೆಂದೇ ಹೇಳಿದರು. ತನ್ನ ಆಕಳನ್ನು ಜಗನ್ನಾಥಶೆಟ್ಟಿ ಕೊಂಡೊಯ್ಯುವಾಗ ಉಪಾಯ



ವಿಲ್ಲದೆ ಬಸವ ನೋಡುತ್ತಾ ಸುಮ್ಮನೆ ನಿಂತುಬಿಟ್ಟ. ಅದು ಅವನ ಸಮ್ಮತಿ ಎಂದು ಎಲ್ಲರೂ ಭಾವಿಸಿದರು.

ಎಷ್ಟು ಆಲೋಚನೆ ಮಾಡಿದರೂ ತನಗೆ ಅನ್ಯಾಯವೇ ಆದಂತೆ ಬಸವನಿಗೆ ತೋರಿತು. ಆ ದೇಶದ ನ್ಯಾಯಾಧಿಕಾರಿ ನ್ಯಾಯ ನಿರ್ಣಯ ಮಾಡುವುದರಲ್ಲಿ ತುಂಬ ಸಮರ್ಥನೆಂದು ಖ್ಯಾತನಾಗಿದ್ದ. ಬಸವ ತನಗೆ ನಡೆದುದು ನ್ಯಾಯವೋ ಅನ್ಯಾಯವೋ ತಿಳಿದುಕೊಳ್ಳಬೇಕೆಂದು ನಿಶ್ಚಯಿಸಿ ಆತನಬಳಿಗೆ ಹೋದನು.

ಆ ನ್ಯಾಯಾಧಿಕಾರಿ ಬಸವ ಹೇಳಿದುದನ್ನೆಲ್ಲಾ ಶ್ರದ್ಧೆಯಿಂದ ಕೇಳಿದನು. ಅವನ ಸ್ಥಿತಿಗತಿಗಳನ್ನೆಲ್ಲ ಕುರಿತು ಪ್ರಶ್ನಿಸಿ ತಿಳಿದುಕೊಂಡನು. ಆಮೇಲೆ ಬಸವನೊಂದಿಗೆ, "ನಿನಗೆ ದನದ ವಿಷಯದಲ್ಲಿ ನ್ಯಾಯವು ನಡೆಯಲಿಲ್ಲ. ಚಿಂತಿಸಬೇಡ. ನಾನು ವಿಚಾರಣೆ ನಡೆಸುತ್ತೇನೆ. ನಾಳೆ ಕೂಡಾ ನೀನು ನ್ಯಾಯಾಸ್ಥಾನಕ್ಕೆ ಬಾ" ಎಂದು ಹೇಳಿ ಕಳುಹಿಸಿಕೊಟ್ಟನು.

ದೊಡ್ಡ ನ್ಯಾಯಾಧೀಶನ ಕರೆಯಂತೆ ಮರುದಿನ ಬಸವನ ಫಿರ್ಯಾದಿಗೆ ಸಂಬಂಧಿಸಿದ ಎಲ್ಲರೂ ನ್ಯಾಯಾಸ್ಥಾನದಲ್ಲಿ ಹಾಜರಾದರು. ನ್ಯಾಯಾಧೀಶನು ವಿಚಾರಣೆ ನಡೆಸಿ, ಕಡೆಗೆ ಜಗನ್ನಾಥಶೆಟ್ಟಿಯೊಂದಿಗೆ, "ಬಸವನ ದನವು ನಿನ್ನ ಹೊಲಕ್ಕೆ ಬಂದು ನಿನಗೆ ನಷ್ಟವನ್ನುಂಟು ಮಾಡಿದ ಮಾತು ನಿಜವೇ. ಆದರೆ ನಿನಗೆ ಬಂದ ಈ ನಷ್ಟಕ್ಕೆ ಬಸವನ ಅಜಾಗರೂಕತೆ ಮಾತ್ರ ಕಾರಣವೆಂಬುದು ಸರಿಯಲ್ಲ. ನಿನ್ನ ನಷ್ಟಕ್ಕೆ ನಿಜವಾದ ಕಾರಣಗಳು ಎರಡು ಕಾಣುತ್ತವೆ. ಒಂದು ನೀನು ಬಸವನಿಗೆ ಮಾರಿದ ಹಗ್ಗ. ಅದು ಬಲವಾದುದಲ್ಲ. ಆ ಹಗ್ಗವನ್ನು ನೀನು ಬಸವನಿಗೆ ಎರಡು ಪಾಲು ಬೆಲೆಗೆ ಮಾರಿ ಅಕ್ರಮವಾಗಿ ಲಾಭ ಸಂಪಾದಿಸಿರುವೆ. ನಿನ್ನ ಪೈರಿನ ನಷ್ಟಕ್ಕೆ ಎರಡನೇ ಕಾರಣ ನಿನ್ನ ಹೊಲಕ್ಕೆ ಬೇಲಿಯೇ ಇಲ್ಲ. ಬೇಲಿಯಿಲ್ಲದ ಹೊಲದೊಳಗೆ ಯಾವ ಪಶುಗಳಾದರೂ ಪ್ರವೇಶಿಸಿ ಪೈರಿಗೆ ನಷ್ಟವುಂಟು ಮಾಡಬಹುದು. ಆದುದರಿಂದ ನಿನಗಾದ ನಷ್ಟಕ್ಕೆ ಎಲ್ಲಾ ವಿಧದಲ್ಲಿಯೂ ನೀನೇ ಬಾಧ್ಯನು. ನೀನು ಬಸವನಿಂದ ಪಡೆದ ಹಣಕ್ಕೆ ಗಟ್ಟಿಯಾದ ಹಗ್ಗವನ್ನು ಕೊಟ್ಟಿರುತ್ತಿದ್ದರೆ ದನವು ಅದನ್ನು ತುಂಡು ಮಾಡಿಕೊಂಡು ಮೇಯಲು ಹೋಗುತ್ತಿದ್ದಿಲ್ಲ. ನಿನ್ನ ಹೊಲಕ್ಕೆ ಬೇಲಿಯಿರುತ್ತಿದ್ದರೆ ಅದು ಮತ್ತೆಲ್ಲಿಯಾದರೂ ಮೇಯುತ್ತಿದ್ದಿತು. ಹೀಗೆಲ್ಲಾ ನೀನು ಮಾಡಿದ ತಪ್ಪಿಗಾಗಿ ಬಸವನಿಂದ ದನವನ್ನು ಎಳೆದುಕೊಂಡುದು ಇನ್ನೂ ದೊಡ್ಡ ತಪ್ಪು. ನೀನು ಕೂಡಲೇ ಆ ದನವನ್ನು ಬಸವನ ಹಟ್ಟಿಗೆ ಒಯ್ದು ಕಟ್ಟಿಬಿಡತಕ್ಕದ್ದು." ಎಂದನು.

ಈ ತೀರ್ಪು ಕೇಳಿ ಜಗನ್ನಾಥಶೆಟ್ಟಿಯ ಮುಖ ಬಾಡಿ ಕಂದಿ ಕಪ್ಪಗಾಯಿತು. ಬಡ ಬಸವನ ಮುಖದಲ್ಲಿ ಜೀವಕಳೆ ಎದ್ದಿತು.





# ಪರಿವರ್ತನೆ

ಸುಮಾರು ನಾಲ್ಕು ದಶಕಗಳ ಹಿಂದೆ ಶ್ರೀಪುರವೆಂಬ ಗ್ರಾಮದಲ್ಲಿ ರಾಘವರಾಯರೆಂಬ ದೊಡ್ಡ ಜಮೀನುದಾರರಿದ್ದರು. ಅವರು ದಾನಶೀಲರಾಗಿ ಎಲ್ಲರ ಹೊಗಳಿಕೆಗಳಿಗೂ ಪಾತ್ರರಾಗಿದ್ದರು. ಅವರ ಗುಣ ಇತರ ಧನಿಕರಿಗೂ ಆದರ್ಶವಾಗಿ ಅನೇಕರು ಅವರ ಹಾಗೆಯೇ ನಡೆದುಕೊಳ್ಳುತ್ತಿದ್ದರು.

ಆ ಊರಿನಲ್ಲಿ ಮಹಾ ಧನಿಕನಾದ ಸುವರ್ಣದಾಸನೆಂಬುವನು ಮಾತ್ರ ಪರಮಲೋಭಿ. ಅವನು ತನ್ನ ಜನ್ಮದಲ್ಲಿ ಒಡಕು ಕಾಸನ್ನು ಕೂಡಾ ದಾನ ಮಾಡಿದವನಲ್ಲ. ಎಷ್ಟು ಧನವಿದ್ದರೂ ಅವನಿಗೆ ತೃಪ್ತಿಯಿಲ್ಲ. ಬಡ್ಡಿಗೆ ಸಾಲಕೊಟ್ಟು ಹೆಚ್ಚು ಹೆಚ್ಚು ಲಾಭ ಸಂಪಾದಿಸಿಕೊಂಡೇ ಇದ್ದನು.

ಹೀಗಿರುವಾಗ ಒಂದುಸಾರಿ ಅಕಾಲದಲ್ಲಿ ಭಾರಿ ತುಫಾನು ಬಂದು ಆ ಪ್ರಾಂತದಲ್ಲೆಲ್ಲಾ ಅನೇಕ ಮನೆಮಾರುಗಳು ಬಿದ್ದುಹೋದುವು. ಮರಮಟ್ಟುಗಳೂ ಪೈರುಪಚ್ಚೆಗಳೂ ನೆಲ ಸಮವಾದುವು. ಬಡ ಜನರೆಲ್ಲಾ ಬರಗಾಲದ ಬಾಯಿಗೆ ಬಿದ್ದರು. ಈ ದೊಡ್ಡ ಕಷ್ಟವನ್ನು ನೋಡಿ ರಾಘವರಾಯರು ಪ್ರಜೆಗಳನ್ನೆಲ್ಲಾ ಕರೆದು. ತನ್ನ ಬಳಿಯಲ್ಲಿದ್ದ ಧನವನ್ನೆಲ್ಲಾ ಅವರ ಮುಂದೆ ಸುರಿದು ಎಲ್ಲರಿಗೂ ಇಷ್ಟಿಷ್ಟು ಕೊಟ್ಟು "ಏನಾದರೂ ಕೊಂಡುಕೊಂಡು ತಿನ್ನಿರಿ" ಎಂದನು.

ಆದರೆ ರಾಘವರಾಯರು ಕೊಟ್ಟ ಹಣ ಎಲ್ಲರಿಗೂ ಸಾಕಾಗಲಿಲ್ಲ. ಆತನ ಜನರು ರಾಘವರಾಯರಿಗೆ ಕೈಮುಗಿದು, "ಅಯ್ಯಾ, ನೀವು ಕೊಟ್ಟ ಹಣ ಎಲ್ಲರಿಗೂ ಸಾಲಲಿಲ್ಲ. ಇನ್ನೂ ಸ್ವಲ್ಪ ಹಣವಿದ್ದರೆ ದಯಮಾಡಿ ಕೊಡಬೇಕು" ಎಂದು ಕೇಳಿಕೊಂಡರು. ಏನು ಮಾಡಬೇಕೆಂದು ತೋರದೆ ಅವರು ಊರೊಳಗಿನ ಧನಿಕರ ಬಳಿಗೆ ಹೋಗಿ. ಬಡ ಜನರಿಗೆ ಸಹಾಯ ಮಾಡಲು ಹಣ ಕೇಳಿದರು. ಅವರು ಯಾರನ್ನು ಕೇಳಿದರೂ, "ಈ ಊರಿನ ದೊಡ್ಡ ಧನಿಕರಾದ ಸುವರ್ಣದಾಸರನ್ನು ಮೊದಲು ಕೇಳಿರಿ. ಇಂಥ ಸಂದರ್ಭದಲ್ಲಿ ಅಂಥವರ ದಾನಧರ್ಮ ನಡೆದರೇನೇ ಸಾರ್ಥಕ" ಎಂದುಬಿಟ್ಟರು.

ಆಗ ರಾಘವರಾಯರಿಗೆ ಒಂದು ಆಲೋಚನೆ ತಟ್ಟಿತು. ಅವರು ಸುವರ್ಣದಾಸನ ಬಳಿಗೆ ಹೋಗಿ, "ಅಯ್ಯಾ, ನನಗೆ ಅವಸರವಾಗಿ ಐದು ಸಾವಿರ ರೂಪಾಯಿ ಬೇಕಾಗಿದೆ. ಆ ಹಣದ ಜತೆಯಲ್ಲಿ ಅದನ್ನು ನೀವು ದಾನವಾಗಿ ಕೊಡುವೆನೆಂದು ನನಗೆ

ಕೆ. ಬಿ. ಎಸ್. ಕುಮಾರ್

ಬರೆದು ಕೊಡಬೇಕು. ಸಾಯಂಕಾಲದಲ್ಲಿ ನಿಮ್ಮ ಹಣವನ್ನು ತಂದುಕೊಡುತ್ತೇನೆ" ಎಂದನು. ಸುವರ್ಣದಾಸನಿಗೆ ಇದೇನೂ ಅರ್ಥವಾಗದೆ, ಮಿಕಿಮಿಕಿ ನೋಡುತ್ತ, "ಸಾಯಂಕಾಲದವರೆಗೆ ಈ ಹಣ ತೆಗೆದುಕೊಂಡು ಏನು ಮಾಡುವಿರಿ?" ಎಂದು ಕೇಳಿದ.

ರಾಘವರಾಯರು ಕಿರುನಗುವಿನೊಂದಿಗೆ, "ನೋಡಿ ಸ್ವಾಮಿ, ನೀವು ಎಂದಿಗೂ ದಾನಧರ್ಮ ಮಾಡುವವರಲ್ಲವೆಂದು ಎಲ್ಲರಿಗೂ ಗೊತ್ತಿದೆ. ಹಾಗಿರುವಾಗ ಐದುಸಾವಿರ ರೂಪಾಯಿಯನ್ನು ನೀವು ಧರ್ಮ ಮಾಡಿದಿರೆಂದು ತಿಳಿದರೆ, ಉಳಿದವರೆಲ್ಲ ನಿಮ್ಮೊಂದಿಗೆ ಸ್ಪರ್ಧೆಗೆ ನಿಂತಹಾಗೆ ದಾನ ಮಾಡಲು ಮುಂದಾಗುತ್ತಾರೆ. ಜನರೆಲ್ಲ ಹಸಿವೆಯಿಂದ ಸಾಯಲಿಕ್ಕೆ ಬಿದ್ದಿದ್ದಾರೆ. ಸಾಯಂಕಾಲದಲ್ಲಿ ನಿಮ್ಮಿಂದ ಪಡೆದ ಹಣವನ್ನು ನಿಮಗೆ ವಾಪಾಸು ತಂದು ಕೊಟ್ಟು, ಉಳಿದವರು ಕೊಟ್ಟದ್ದನ್ನೆಲ್ಲ ಬಡಪ್ರಜೆಗಳಿಗೆ ಹಂಚಿ ಕೊಟ್ಟು ಬಿಡುತ್ತೇನೆ. ಏನೂ ಮಾಡದೆಯೇ ದಾನಧರ್ಮ ಮಾಡಿದ ಪುಣ್ಯ ನಿಮಗೆ ಬರುತ್ತದೆ" ಎಂದರು.

"ಓಹೋ! ಸರಿ. ಹಾಗೇ ಮಾಡಿರಿ. ಸಾಯಂಕಾಲ ನನ್ನ ಹಣ ನನಗೆ ತಂದುಕೊಡುವಿರಷ್ಟೆ?" ಎಂದು ಸುವರ್ಣದಾಸನು ಒಂದು ಚೀಲದಲ್ಲಿ ಐದುಸಾವಿರ ರೂಪಾಯಿಗಳನ್ನು ತುಂಬಿಸಿ, ತಾನು ಆ ಹಣವನ್ನು ದಾನ ಮಾಡುತ್ತಿರುವೆನೆಂದು ಚೀಟಿ ಬರೆದು ರಾಘವರಾಯರಿಗೆ ಕೊಟ್ಟನು. ರಾಘವರಾಯರು ಆ ಚೀಟಿಯನ್ನು ತೋರಿಸಿ ಆ ಊರಿನ ಎಲ್ಲಾ ಧನವಂತರ ಬಳಿಗೂ ಹೋಗಿ, ಅವರೆಲ್ಲರಿಂದಲೂ ದಾನವಾಗಿ ಹಣವನ್ನು ವಸೂಲು ಮಾಡಿ ಅದನ್ನೆಲ್ಲ ಬಡ ಜನರಿಗೆ ಸಿಗುವಂತೆ ಹಂಚಿ ಕೊಟ್ಟರು. ಆದಿನ ಸಾಯಂಕಾಲ, ಸುವರ್ಣದಾಸನಿಂದ ಪಡೆದ ಐದುಸಾವಿರ ರೂಪಾಯಿಯ ಚೀಲವನ್ನು ಹಾಗೆಯೇ ತೆಗೆದುಕೊಂಡು ಹೋಗಿ ಅವನಿಗೆ ಕೊಡುತ್ತ, "ನಿಮ್ಮ ಈ ಧನದ ಕಾರಣದಿಂದ ಬೇಕಾದಷ್ಟು ಹಣ ಸೇರಿತು. ನಿಮ್ಮ ಹಣ ನೀವು ತೆಗೆದುಕೊಳ್ಳಿ" ಎಂದನು.

ಸುವರ್ಣದಾಸ ಆ ಹಣವನ್ನು ಮುಟ್ಟದೆ, "ರಾಘವರಾಯರೇ, ನಾನು ಹಣ ಕೊಟ್ಟುದಕ್ಕೆ ಎಷ್ಟು ಜನರು ಬಂದು ನನ್ನನ್ನು ಎಷ್ಟು ವಿಧವಾಗಿ ಹೊಗಳಿದರು ಗೊತ್ತೆ? ಇಷ್ಟೊಂದು ಆನಂದವನ್ನು ನಾನು ನನ್ನ ಜನ್ಮದಲ್ಲಿ ಪಡೆದಿಲ್ಲ. ದಾನ ಮಾಡುವುದರಲ್ಲಿರುವ ಆನಂದವು ದಾನ ಮಾಡಿದವರಿಗೇ ಗೊತ್ತು. ಇನ್ನು ನಾನು ಕೂಡಾ ನಿಮ್ಮ ಹಾಗೇ ದಾನ ಮಾಡುವವನೇ. ಇಗೊಳ್ಳಿ, ಇನ್ನೊಂದು ಐದು ಸಾವಿರ ತೆಗೆದುಕೊಂಡು ಅನಾಥರಿಗೆ ದಾನ ಮಾಡಿಬಿಡಿ" ಎಂದು ಹೇಳಿ, ಇನ್ನೊಂದು ಗಂಟನ್ನೂ ಅದರ ಬದಿಯಲ್ಲಿಟ್ಟನು.





# ಅಮರವಾಣಿ

ಸತ್ತ್ವಾಭಿಜನ ಸಂಪನ್ನ
ಸ್ಸಾನುಕ್ರೋಶೋ ಜಿತೇಂದ್ರಿಯಃ
ಕೃತಜ್ಞಃ ಸತ್ಯವಾದೀ ಚ
ರಾಜಾ ಲೋಕೇ ಮಹೀಯತೇ ೧

ಬಲವಂತನೂ, ಒಳ್ಳೆಯ ಕುಲದಲ್ಲಿ ಹುಟ್ಟಿದವನೂ, ಇಂದ್ರಿಯಗಳನ್ನು ಜಯಿಸಿದವನೂ, ಸತ್ಯ ಮಾತಾಡುವವನೂ ಆಗಿರುವ ರಾಜನನ್ನು ಲೋಕವು ಮೆಚ್ಚುತ್ತದೆ.

ಯಸ್ತು ರಾಜಾ ಸ್ಥಿತೋ ಧರ್ಮೇ
ಮಿತ್ರಾಣಾಮುಪಕಾರಿಣಾಂ
ಮಿಥ್ಯಾ ಪ್ರತಿಜ್ಞಾಂ ಕುರುತೇ
ಕೋ ನೃಶಂಸತರಸ್ತತಃ

ಅಧರ್ಮ ನಡತೆಯವನಾಗಿ, ಉಪಕಾರ ಮಾಡಿದವರಿಗೆ ಅಸತ್ಯ ಪ್ರಮಾಣಗಳನ್ನು ಮಾಡುವ ರಾಜನು ಮಹಾಪಾಪಿಯೇ ಸರಿ.

ಅಮಿತ್ರಾಣಾಂ ವಧೇ ಯುಕ್ತೋ
ಮಿತ್ರಾಣಾಂ ಸಂಗ್ರಹೇ ರತಃ
ತ್ರಿವರ್ಗ ಫಲ ಭುಕ್ತಾತು
ರಾಜಾ ಧರ್ಮೇಣ ಯುಜ್ಯತೇ.

ಶತ್ರುಗಳನ್ನು ಕೊಲ್ಲುತ್ತ, ಮಿತ್ರರನ್ನು ಹೆಚ್ಚಿಸಿಕೊಳ್ಳುತ್ತ, ಧರ್ಮ ಅರ್ಥಕಾಮಗಳನ್ನು ಅನುಭವಿಸುವ ರಾಜನು ರಾಜಧರ್ಮವನ್ನು ಚೆನ್ನಾಗಿ ನೆರವೇರಿಸಬಲ್ಲನು.

ರಾಜಧರ್ಮ

Photo by Anant Desai



ಬಹುಮಾನ
ಪಡೆದ ಶೀರ್ಷಿಕೆ

**ಕೂಡಿ ಬಾಳಲಾರವು**

ಕಳುಹಿಸಿದವರು :
ಹಲಸ್ವಾಮಿ

## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೦







★ ಮೇಲಿನ ಫೋಟೋಗಳಿಗೆ ಶೀರ್ಷಿಕೆಗಳು ಜೂನ್ ೧೫ರೊಳಗೆ ತಲಪಬೇಕು.

★ ಶೀರ್ಷಿಕೆಗಳು ಒಂದಕ್ಕೊಂದು ಸರಿಹೊಂದುವಂತಿರಬೇಕು. ಶೀರ್ಷಿಕೆಗಳನ್ನು ಕಾರ್ಡಿನಲ್ಲೇ ಬರೆಯಬೇಕು. ಗೆದ್ದ ಶೀರ್ಷಿಕೆಗಳು ಆಗಸ್ಟ್ ೭೫ರ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.

# ಚಂದಮಾಮ

## ಈ ಸಂಚಿಕೆಯಲ್ಲಿರುವ ಕಥೆಗಳು :



ಎರಡನೇ ಹೊದಿಕೆಯ ಚಿತ್ರ:
**ಕೈಯಿಂದ ಕೈಗೆ**

ಮೂರನೇ ಹೊದಿಕೆಯ ಚಿತ್ರ:
**ಬಾಯಿಯಿಂದ ಹೊಟ್ಟೆಗೆ**


Printed by B. V. REDDI at The Prasad Process Private Ltd., and Publis[illegible] by B. VISWANATHA REDDI for Chandamama Publications, 2 & [illegible] Road, Madras-600026. Controlling Editor : 'CHAKRAPANI'



# ಅಪ್ಪಿಮಕ್ಕಳ ಕಥೆ

June 1975

೧೧

[ರಾಕ್ಷಸನ ಭೂಗೃಹದಲ್ಲಿ ಭಸ್ಮ ಅಂಜನ ಮೊದಲಾದುವು ಪ್ರಭಾವ ಕಳೆದುಕೊಳ್ಳುವುವೆಂದು ತಿಳಿದು ತ್ರಿವಳಿ ಸೋದರರು ನಿರಾಶರಾದರೂ ಧೈರ್ಯ ಬಿಡಲಿಲ್ಲ. ರಾಕ್ಷಸನು ಅವರ ಕೈಯಲ್ಲಿದ್ದ ಮಹಿಮೆಯ ವಸ್ತುಗಳೆಲ್ಲವನ್ನೂ ತೆಗೆದುಕೊಂಡುಬಿಟ್ಟ. ಆಮೇಲೆ ಅವರನ್ನೆಲ್ಲ ಶಿಲಾಪ್ರತಿಮೆಗಳನ್ನಾಗಿಯೂ ಮಾಡಿದ. ಅತ್ತ, ದಾನಶೀಲ ಮಹಾರಾಜನೂ ರಾಣಿಯೂ ದುಃಖದಲ್ಲಿ ಮುಳುಗಿಹೋಗಿದ್ದರು.]

ರಾಕ್ಷಸನ ಕೈಯಲ್ಲಿ ಸಿಕ್ಕಿಕೊಂಡು ತ್ರಿವಳಿ ಸಹೋದರರು ನಿರುಪಾಯರಾಗಿ, ಹೇಗೆ ಶಿಲಾಪ್ರತಿಮೆಗಳಾದ [illegible]ಲ್ಲಾ ಸರೋವರದಲ್ಲಿ ಹಂಸರೂಪಿಗಳಾಗಿ [illegible]ತ್ತಿರುವ ತ್ರಿವಳಿ ರಾಜಕುಮಾರಿಯರು ನೋಡಿ [illegible] ಚಡಪಡಿಸುತ್ತಿದ್ದರು. ರಾಕ್ಷಸರಿಬ್ಬರೂ [illegible]ದೆ ಬಿಟ್ಟ ವಿಷಯವನ್ನು ಕೂಡಾ ಅವರು [illegible]ದ್ದರು.

ಅದೇನು ವಿಷಯವೆಂದರೆ, ಉದಯನನು ಬೆಳ್ಳಿ [illegible] ಡಬ್ಬಿಯನ್ನು ತೆಗೆದು, ಅದರೊಳಗಿನ ಭಸ್ಮ [illegible] ಕಣ್ಣಮೇಲೆ ಚೆಲ್ಲಿಕೊಳ್ಳಬೇಕೆಂದು ಪ್ರಯತ್ನಪಡುವಾಗ ರಾಕ್ಷಸನು ಅಲ್ಲಿಗೆ ಬಂದುಬಿಟ್ಟಿದ್ದನಷ್ಟೆ? ಆ ಸಮಯದಲ್ಲಾದ ಗಡಿಬಿಡಿಯ ಗಾಬರಿ ನಡುಕದಲ್ಲಿ ಡಬ್ಬಿ ಕೈತಪ್ಪಿ ಕೆಳಗೆ ಬಿದ್ದುಹೋಗಿತ್ತು. ಬಗ್ಗಿ ಅದನ್ನು ತೆಗೆದುಕೊಳ್ಳಲಿಕ್ಕೆ ಆ ಸಹೋದರರಿಗೆ ವ್ಯವಧಿಯಿಲ್ಲದೆ, ರಾಕ್ಷಸನ ಕಣ್ಣಿಗೆ ಸಿಕ್ಕಿಬಿದ್ದಿದ್ದರು. ಆ ಡಬ್ಬಿ ನೆಲದಲ್ಲೇ ಹೊರಳಾಡಿಕೊಂಡಿರುವುದನ್ನು ಆ ಕುಮಾರಿಯರು ನೋಡಿದ್ದರು.

ರಾಕ್ಷಸರಿಬ್ಬರೂ ಅವರವರ ದಾರಿ ಹಿಡಿದು ಹೊರಟುಹೋದ ಮೇಲೆ, ಸದ್ಯ ಅವರಾರೂ ಬರುವ ಸೂಚನೆಯೂ ಇಲ್ಲದುದರಿಂದ ಮೂವರು ರಾಜ



ಕುಮಾರಿಯರೂ ಸರೋವರದಿಂದ ಮೇಲೆ ಬಂದು, ನಿಜರೂಪಧಾರಿಗಳಾಗಿ, ಆ ಡಬ್ಬಿಯನ್ನು ಹುಡುಕ ತೊಡಗಿದರು. ಅದು ಸುಲಭದಲ್ಲಿ ಕಾಣಸಿಗಲಿಲ್ಲ. ಇಲ್ಲೇ ಇದ್ದುದು ಎಲ್ಲಿ ಹೋಯಿತೋ ?

ಮೂವರು ಕುಮಾರಿಯರೂ ಆಶ್ಚರ್ಯದಿಂದ, "ಇದೆಂತಹ ವಿಚಿತ್ರವೋ! ಆ ಡಬ್ಬಿ ಇಲ್ಲಿ ಬಿದ್ದುದನ್ನು ನಾವು ನೋಡಿದ್ದೇವೆ. ಬಿದ್ದಲ್ಲೇ ಇದ್ದುದನ್ನೂ ಕಂಡಿದ್ದೇವೆ. ಹೇಗೆ ಮಾಯವಾಗಿಹೋಯಿತೋ ? ಈ ಮಂತ್ರದ ನೆಲವೇ ನುಂಗಿತೇನೋ? ಅಲ್ಲ, ನಾವು ನೋಡಿದ್ದೇ ಬರೀ ಮಾಯೆಯೋ ?" ಎಂದು ಒಬ್ಬಳು ಹೇಳಲು, "ನಮ್ಮ ಕಣ್ಣು ತಪ್ಪಿ ರಾಕ್ಷಸನ ಕಾಲು ಗೀಲು ತಾಗಿ ದೂರ ಹೋಗಿರಬಹುದು. ಇಷ್ಟರಲ್ಲೇ ತಾಳ್ಮೆಗೆಟ್ಟರೆ ಹೇಗೆ? ಇನ್ನೂ ಹುಡುಕೋಣ ಬನ್ನಿ" ಎಂದಳು ಇನ್ನೊಬ್ಬಳು.

ಹಾಗೆಯೇ ಅವರು ಮೂವರೂ ಸುತ್ತು ಮುತ್ತಲೂ ಹುಡುಕಿಕೊಂಡು ಹೋಗುವಾಗ,
ಸರೋವರಕ್ಕೆ ಬಹಳ ದೂರದಲ್ಲಿ ಆ ಡಬ್ಬಿ ಕಂಡಿ
ಅದನ್ನು ಎತ್ತಿಕೊಂಡು ಸಂತೋಷಪಡುವುದರೊ
ಅದನ್ನು ಎಲ್ಲಿ ಅಡಗಿಸಿಡುವುದೆಂಬ ಪ್ರಶ್ನೆ ಎ
ಬಹಳ ಆಲೋಚನೆ ಮಾಡಿ, ನೆನಪಿನ ಗುರುತುಗಳ
ನೋಡಿ, ಸರೋವರದ ಬದಿಯಲ್ಲೇ ಒಂದು ಹೊ
ತೆಗೆದು ಆ ಸಣ್ಣ ಡಬ್ಬಿಯನ್ನು ಅದರಲ್ಲಿ
ಮೇಲೆ ಮಣ್ಣು ಮುಚ್ಚಿದರು.

ಆಮೇಲೆ ಅವರ ಆಲೋಚನೆಗೆ ಇನ್ನೊ
ಪ್ರಶ್ನೆ ಬಂದಿತು. ತಮ್ಮನ್ನು ಹುಡುಕಲು ಬ
ಸಿಕ್ಕಿಕೊಂಡ ಸಹೋದರರನ್ನು ಕಾಪಾಡುವ ಮಾ
ವೇನು ? "ನನಗೊಂದು ಉಪಾಯ ಹೊಳೆ
ತ್ತದೆ. ಹೇಳಲೆ ?" ಎಂದಳು ಸುಕೇಶಿನಿ. ಉಳಿದಿಬ್ಬ
ಉತ್ಸಾಹದಿಂದ "ಏನದು ? ಹೇಳು, ಬೇ
ಎಂದರು ಒಂದೇ ಬಾಯಿಗೆ.

ಸುಕೇಶಿನಿಯೆಂದಳು : "ಹೇಗಾದರೂ ವ
ರಾಕ್ಷಸನನ್ನು ಅಲ್ಲಿಂದ ಕದಲಿಸಿ ಈ ಕಡೆಗೆ ಬರುವ
ಮಾಡಬೇಕು. ಅದಕ್ಕಾಗಿ ನಾವು ಹೀಗೆ ಮಾಡಬಹು
ನಾವೆಲ್ಲರೂ ಕೂಡಿ ಅವನ ಬಳಿಗೆ ಹೋಗಿ, ಚೆಂ
ನೃತ್ಯ ಮಾಡಿ ತೋರಿಸುವೆವೆಂದು ಅವನು ನಂಬ
ಹಾಗೆ ಹೇಳೋಣ. ಹೀಗೆ ಹೋಗುವ ನಮ್ಮೊ
ನವಳೊಬ್ಬಳು ಸ್ವಲ್ಪ ಮಂತ್ರ ಜಲವನ್ನೂ ಇ
ಕೊಂಡಿರಬೇಕು. ಅದನ್ನು ಆ ಯುವಕರ
ಪ್ರತಿಮೆಯ ಮೇಲೆ ಚೆಲ್ಲಿಬಿಡಬೇಕು. ಅವ
ಮಾಮೂಲು ರೂಪ ಬಂದುಬಿಡುತ್ತದೆ. ರಾಕ್ಷಸ
ಗೊತ್ತಾಗದ ಹಾಗೆ ಒಬ್ಬಳು ಅವರ ಬಳಿಯ
ಇರಬೇಕು. ಆಮೇಲೆ ಏನು ಮಾಡಬೇಕೆಂ
ಆ ಯುವಕರೊಂದಿಗೆ ಮಾತಾಡಬಹುದು. ಅವ
ಪಾರಾಗಲು ಸಾಧ್ಯವಾಗುವಂತಹ ಒಳ್ಳೊಳ್ಳೆ
ಉಪಾಯಗಳು ಹೊಳೆಯಬಹುದು."

ಸುಕೇಶಿನಿಯ ಮಾತು ಕೇಳಿ ಸುಹಾಸಿನಿ, "ಹೌ
ಆ ರಾಕ್ಷಸ ನಮ್ಮ ಮೋಸದ ಜಾಲದಲ್ಲಿ ಬೀಳುವ

...ತೂನ್ಮದವನೇ ? ಒಂದುವೇಳೆ ನಾವು ಅವನಿಗೆ ...ಮೋಸಮಾಡಿದರೂ, ಅವನನ್ನು ಅಲ್ಲಿಂದ ಇನ್ನೊಂದು ...ಗೆ ಎಳೆದುಕೊಂಡು ಹೋದರೂ ಅವನ ಭವನ ...ಲ್ಲಿಯೇ ಇದ್ದು, ಅವನ ಕಣ್ಣು ತಪ್ಪಿಸುವ ಕೆಲಸ ...ಯಾದೀತೆಂದು ನನಗೆ ಕಾಣುವುದಿಲ್ಲ. ನಾವು ... ಸಿಕ್ಕಿಬಿದ್ದೆವೆಂದರೆ, ನಮ್ಮ ಸಮಾಚಾರವೂ, ... ಯುವಕರ ಸಮಾಚಾರವೂ ಅಸ್ತಮಿಸಿ ಹೋಗುತ್ತದೆ. ಈ ಉಪಾಯ ಚೆನ್ನಾಗಿದ್ದರೂ, ...ಗಾದು ಕೆಟ್ಟುಹೋದೀತು. ಕೆಟ್ಟರೆ ಮತ್ತೇನೂ ...ಉ ಮಾಡಲೂ ಸಾಧ್ಯವಿಲ್ಲ" ಎಂದಳು.

ಆ ಮಾತು ಕೇಳಿ ಸುಕೇಶಿನಿ, "ಹಾಗಂತ ಧೈರ್ಯ ...ಳೆದುಕೊಂಡುಬಿಟ್ಟರೆ ಯಾವ ಕೆಲಸವನ್ನೂ ಮಾಡಲು ...ಧ್ಯವಿಲ್ಲ. ಅಪಾಯದಲ್ಲಿ ಸಿಕ್ಕಿಕೊಳ್ಳುವ ಕಷ್ಟಕ್ಕೆ ...ದಿದರೆ, ನಮಗಾಗಿ ಇಲ್ಲಿ ಬಂದವರಿಗೆ ನಾವೇನೂ ...ಡಲಾರೆವು. ದೇವರನ್ನು ನಂಬಿ, ನಮಗೆ ತೋರಿ... ಮಾಡುವುದು ಒಳ್ಳೆಯದಲ್ಲವೆ? ಅವರನ್ನು ...ಸಲು ನಮ್ಮಿಂದಾದಷ್ಟು ಪ್ರಯತ್ನ ಮಾಡುವುದೇ ...ವೆನ್ನುವಿರಾ?" ಎಂದಳು.

"ಸರಿ, ಆದುದಾಗಲಿ, ಪ್ರಯತ್ನ ಮಾಡೋಣ" ...ಉ ಮೂವರೂ ನಿರ್ಧರಿಸಿಕೊಂಡರು. ಮಾರುದಿನ ...ರ ಕಾರ್ಯದ ಮೊದಲನೇ ಭಾಗವಾಗಿ ಸರೋ...ದಲ್ಲಿರುವ ಎಲ್ಲಾ ಹಂಸಗಳು ಮೇಲೆ ಬಂದುವು. ಮೇಲೆ ಬಂದಾಗ ಎಲ್ಲ ಹಂಸಗಳೂ ಮಾನವಾಕಾರ ...ಳೆ ನಿಂತಿದ್ದರು. ಎಲ್ಲರೂ ತ್ರಿವಳಿ ರಾಜಕುಮಾರಿಯ ...ರೆಯೇ ರಾಕ್ಷಸನ ಕೈಗೆ ಸೆರೆಸಿಕ್ಕಿದ ತರುಣ ...ಣಿಯರೇ.

ಸುಹಾಸಿನಿ ಎಲ್ಲ ತರುಣರನ್ನೂ ಮತ್ತೆ ಸರೋವರ ...ಳಗೆ ಹೋಗುವಂತೆ ಹೇಳಿದಳು. ಈಗ ಅಲ್ಲಿ ...ಳಿದವರು ತರುಣಿಯರು ಮಾತ್ರವೇ. ಅವರೆಲ್ಲರೂ ...ರಿ ಅಲ್ಲಿಯ ತೋಟದ ಹುವ್ವಗಳನ್ನು ...ಯ್ಯುತ್ತಾ, ಹಾಡುತ್ತಾ, ರಾಕ್ಷಸನ ಅರಮನೆಯ



ಕಡೆಗೆ ನಡೆಯತೊಡಗಿದರು. ಹಾಗೆ ಅವರು ನಡೆದು ಬರುವ ಧ್ವನಿಗಳನ್ನು ಕೇಳಿ ಕಾವಲಿನ ರಾಕ್ಷಸ ಮೆಟ್ಟಿಬಿದ್ದ. ಮರುಕ್ಷಣದಲ್ಲಿ ಎದ್ದು ಕುತೂಹಲದಿಂದ ಅವರ ಎದುರಾಗಿ ಬಂದು, "ಇದೇನಿದೇನು? ಎತ್ತ ದಾಳಿ ಹೊರಟಿರಿ? ನನ್ನ ಮೇಲೇನಾ? ಯುದ್ಧ ಮಾಡಲು ಬರುತ್ತಿರುವಿರಾ?" ಎಂದು ನೆಗಾಡಿದ.

ಎಲ್ಲರಿಗಿಂತ ಮುಂದೆ ನಿಂತಿದ್ದ ಸುಕೇಶಿನಿ, "ಅಯ್ಯೋ, ಹಾಗೇನಿಲ್ಲಯ್ಯ. ನಿನ್ನಂಥಾ ಮಹಾ ಕಾಯನಮೇಲೆ ದಾಳಿ ಮಾಡಲು ಯಾರಿಂದಾದೀತು? ಹೊಸತಾಗಿ ಬಂದ ಮೂವರು ಗಂಡುಗಳು ಏನಾದರೋ ಅಂತ ನೋಡಲು ಬಂದೆವು. ಅಷ್ಟೇ ಮತ್ತೇನಿಲ್ಲ." ಎಂದಳು.

ಆಗ ರಾಕ್ಷಸನು ಇನ್ನಿಷ್ಟು ಜೋರಾಗಿ ನಗುತ್ತ, "ಅವರ ಗತಿ ಏನಾಗುವುದೆಂದು ನಿಮಗೆ ಗೊತ್ತಿಲ್ಲವೆ? ಇದಕ್ಕೆ ಮೊದಲು ಬಂದ ಪಿಳ್ಳೆಗಳೆಲ್ಲ ಏನಾದರೋ ಅದೇ ಗತಿ ಇವರಿಗೂ ಆಯಿತು. ನೋಡಬೇಕೇನು?



ಬನ್ನಿ" ಎಂದು ಕೆಲವರನ್ನು ಒಳಗೆ ಕರೆದುಕೊಂಡು
ಹೋಗಿ, ಮೂವರು ಅವಳ ಸಹೋದರರು ಶಿಲಾ
ಪ್ರತಿಮೆಗಳಾಗಿ, ನಿಂತಿರುವುದನ್ನು ತೋರಿಸಿದನು.
"ಅಯ್ಯೋ ಪಾಪ! ಯಾವ ಊರಿನವರೋ?
ಹೇಗಾದರು!" ಎಂದು ಮೂವರೂ ಒಂದೇ ಕಂಠ
ದಿಂದ ಅನುತಾಪಪಟ್ಟರು.

ಆ ಶಿಲೆಗಳನ್ನು ನೋಡಿ ಸುಕೇಶಿನಿ, ರಾಕ್ಷಸನನ್ನು
ಕುರಿತು, "ನಿನ್ನ ಉದ್ಯೋಗ ಚೆನ್ನಾಗಿದೆಯಯ್ಯ.
ನನಗೊಂದು ಸಂದೇಹ. ಅದನ್ನು ತೀರಿಸುವೆಯಾ?
ನಾವಿಷ್ಟುಮಂದಿ ಒಟ್ಟಿಗೆ ಕೂಡಿಕೊಂಡಿದ್ದೇವಷ್ಟೆ?
ಸುಮ್ಮನೆ ನೀರಿನಲ್ಲಿದ್ದೂ ಇದ್ದು ಬೇಸರವಾಗಿಹೋಗಿದೆ.
ನಿನ್ನ ಅಣ್ಣ ಕೊಡುವ ಬಲಿ ಕಾರ್ಯ ಬೇಗನೇ
ಮುಗಿದರೆ ಒಳ್ಳೆಯದಿತ್ತು. ಗುಂಪಾಗಿರುವ ನಮಗೇ
ಹೀಗಿರುವಾಗ, ನೀನೊಬ್ಬನೇ ಹೇಗಿರುವೆಯೋ?
ಪಾಪ! ಈ ಶಿಲಾಪ್ರತಿಮೆಗಳ ನಡುವೆ ವರುಷಗಟ್ಟಲೆ
ಏಕಾಂಗಿಯಾಗಿರುವ ನಿನಗೆ ಎಷ್ಟು ಬೇಸರವಾಗಿರ
ಬೇಡ? ಸುಮ್ಮನೆ ಆಕಾಶ ನೋಡುತ್ತ ಅದು
ಹೊತ್ತು ಕಳೆಯುವಿಯೋ ಏನೊ!" ಎಂದಳು

ಅದಕ್ಕೆ ರಾಕ್ಷಸನು ತಲೆದೂಗುತ್ತ, "ಹ
ಹೌದು. ನನಗೆ ಮಾತ್ರ ಬೇಸರವಿಲ್ಲ ಅಂತ ಮ
ರೇನು? ಆದರೆ ನಾನೇನು ಮಾಡಲಿ? ನ
ಈ ಸ್ಥಳವನ್ನು ಬಿಟ್ಟು ಹೋದ ಮರುಕ್ಷಣ
ನನ್ನನ್ನೇ ಬಲಿ ಹಾಕಿಬಿಡುತ್ತಾನೆ ನನ್ನ ಅಣ್ಣ.
ಪ್ರಭಾವ ಅಂಥಾದ್ದು. ಏನೂ ತೋರದೆ ನ
ಸಿಕ್ಕಿಕೊಂಡು ಬಿಟ್ಟಿದ್ದೇನೆ. ನನ್ನ ಸ್ಥಿತಿ ಈಗ
ನಿಮಗೆ ಗೊತ್ತಾಯಿತೆ?" ಎಂದು ರಾಕ್ಷಸನು
ಮನಸ್ಸಿನೊಳಗಿನ ಬಾಧೆಯನ್ನು ಹೊರಗೆ ಹಾಕಿದ

ಸುಕೇಶಿನಿ ಅವನಿಗೇನೋ ಸಹಾಯ ಮಾಡು
ಳಂತೆ, "ಹೌದು ಹೌದು. ಅದೇ ಅಂದುಕೊ
ನಿನ್ನ ಮುಖ ನೋಡಿದರೇ ತಿಳಿಯುತ್ತೆ. ಎಷ್ಟು
ಹೀಗಿರಬೇಕೋ? ಒಂದು ಮಾಡುವಿಯ
ಸ್ವಲ್ಪಹೊತ್ತು ನಮ್ಮ ಜತೆ ಬಾರೇನು? ಸಂತೊ
ದಿಂದ ಮನಸು ಅರಳೀತು! ನಿನಗೆ ಸಂತೊ
ವಾಗುವ ಹಾಗೆ ನಾವೆಲ್ಲಾ ಆಡಿಹಾಡಿ ತಿರ
ತ್ತೇವೆ. ನಮಗೂ ಬೇಸರ ಹೋಗುತ್ತದೆ. ಬ
ಪುಣ್ಯವೂ ಬರುತ್ತೆ. ನಿನಗೂ ಒಳ್ಳೆಯದೆನಿಸುತ್ತ
ಏಳು ಬಾ" ಎಂದು ರಾಕ್ಷಸನಿಗೆ ಉತ್ಸಾಹ ಬರಿಸಿದ

"ಅಯ್ಯಯ್ಯೊ! ಈ ಭವನ ಪ್ರದೇಶವನ್ನು ಬ
ಕದಲುವುದೆ? ನನ್ನಂಥಾ ಆನೆ ಹಾಗಿರುವವ
ಕಾವಲು ಕಾಯುತ್ತಿದ್ದಾಗಲೇ, ನನ್ನ ಕಣ್ಣಿಗೆ ಧೂ
ಹಾಕಿ ಈ ಪಿಳ್ಳೆಗಳು ಹೇಗೋ ಒಳಗೆ ಬಂದುಬಿಟ್ಟ
ನಾನೇ ಇಲ್ಲಿಂದ ಅತ್ತ ಹೋಗಿಬಿಟ್ಟರೆ, ಮತ್ತೆ ಕ
ವವರಾರು? ಎಷ್ಟು ಮಂದಿ ಹಗೆಗಳನ್ನು ಕ
ಕೊಂಡಿದ್ದಾನೋ ಅಣ್ಣ!" ಎಂದ ರಾಕ್ಷಸ.

"ನಿನ್ನದು ಬರಿಯ ಭ್ರಾಂತಿ! ಇಂಥಾ ಸ್ಥ
ಯಾರಯ್ಯಾ ಹಾಗೆ ಧೈರ್ಯ ಮಾಡಿ ಬರುವವರು
ಒಂದುವೇಳೆ ಬಂದರೂ ನಿನ್ನ ಕಣ್ಣಿಗೆ ಬೀಳದೆ ತ

ಕೊಳ್ಳುವರೇನು? ಹೋಗಲಿ. ಅಷ್ಟೂ ನಿನಗೆ ಸಂಶಯವಿದ್ದರೆ ನಮ್ಮಲ್ಲೊಬ್ಬಳು ನಿನಗೆ ಬದಲಾಗಿ ಕಾವಲಿರುತ್ತಾಳೆ. ಸ್ವಲ್ಪ ಹೊತ್ತು ಸಂತೋಷವಾಗಿ ಕಾಲಕ್ಷೇಪ ಮಾಡಿ, ಮತ್ತೆ ನಿನ್ನ ಕೆಲಸ ನೋಡಿಕೋ" ಎಂದಳು ಸುಕೇಶಿನಿ. ಈ ಮಾತು ರಾಕ್ಷಸನಿಗೆ ಹಿಡಿಸಿತು.

"ಹಾಗಾದರೆ ನನಗೆ ಬದಲಾಗಿ ಕಾವಲಿರುವುದು ಯಾರು?" ಎಂದು ಕೇಳಿದ ರಾಕ್ಷಸ. ಸುಕೇಶಿನಿ ಸುಹಾಸಿನಿಯ ಮುಖವನ್ನು ನೋಡಿ, "ಬೇರೆ ಯಾರು ಯಾಕೆ? ನನ್ನ ಅಕ್ಕನೇ ಆ ಕೆಲಸ ಮಾಡುತ್ತಾಳೆ" ಎಂದಳು. ಆ ಪ್ರಕಾರವೇ ಸುಹಾಸಿನಿಯನ್ನು ಆ ಭವನದಲ್ಲಿ ಬಿಟ್ಟು, ಅವರೆಲ್ಲ ಸರೋವರದ ಕಡೆಗೆ ಹೊರಟರು. ರಾಕ್ಷಸನು ಅವರ ಬೆಡಗಿನ ನಡಿಗೆ ನೋಡುತ್ತಾ ಹಿಂದೆಯೇ ಹೋದ.

ಸರೋವರದ ಬದಿಯ ವಿಸ್ತಾರ ಪ್ರದೇಶದಲ್ಲಿ ರಾಕ್ಷಸನನ್ನು ನಡುವೆ ಕುಳ್ಳಿರಿಸಿ, ಎಲ್ಲರೂ ಅವನ ಸುತ್ತಲೂ ಸೇರಿ ನೃತ್ಯ ಮಾಡತೊಡಗಿದರು. ಅವರ ಆಟ ಹಾಡು ನಾಟ್ಯ ವಿನ್ಯಾಸಗಳನ್ನು ನೋಡಿ ರಾಕ್ಷಸನು ತನ್ಮಯನಾಗುತ್ತ, "ಆಹಾ! ದಿನಾ ಹೀಗೆ ಕಾಲಕ್ಷೇಪ ಮಾಡಿದರೆ ಎಷ್ಟು ಚೆನ್ನಾಗಿರುತ್ತೆ!" ಎಂದ ತನಗೆ ತಾನೇ.

ಈರೀತಿಯಾಗಿ ದಿನಾ ಒಬ್ಬಳು ರಾಕ್ಷಸನಿಗೆ ಬದಲಾಗಿ ಕಾವಲು ಕಾಯುವುದೂ, ಅವನು ಉಳಿದವರ ನಡುವೆ, ಅವರು ಹೋದಲ್ಲಿಗೆ ಹೋಗಿ ಅವರು ತೋರಿಸುವ ಆಟ ಹಾಡುಗಳನ್ನು ನೋಡುತ್ತ ಆನಂದಿಸುವುದೂ ಅಭ್ಯಾಸವಾಯಿತು.

ಹೀಗೆ ನಾಲ್ಕು ದಿನಗಳು ಕಳೆಯಲು, ರಾಕ್ಷಸನಿಗೆ ತನ್ನ ಕಾವಲು ಕೆಲಸದ ಮೇಲಿರುವ ಭಯ ಸಂಶಯಗಳು ಮಾಯವಾದುವು. ಈಗ ರಾಕ್ಷಸನು ತಾನಾಗಿ ಬಂದು ಕುಮಾರಿಯರನ್ನು ಕರೆಯಲಾರಂಭಿಸಿದನು. ಇದನ್ನು ನೋಡಿ ಸುಕೇಶಿನಿ ತನ್ನ ತಂತ್ರ ಇಷ್ಟರ ಮಟ್ಟಿಗೆ ಫಲಿಸಿದುದಕ್ಕೆ ಸಂತೋಷಪಟ್ಟಳು.

ಇನ್ನು ಶಿಲಾಪ್ರತಿಮೆಗಳಾಗಿರುವ ಅವಳ ಸಹೋದರರನ್ನು ಮಂತ್ರ ಜಲದಿಂದ ನಿಜರೂಪಕ್ಕೆ ತರಬೇಕಾಗಿದೆ. ಮಂತ್ರಜಲ ತರಬೇಕಾದರೆ, ಏನಾದರೂ ಪಾತ್ರ





ಬೇಕಲ್ಲ? ಹೇಗಾದರೂ ಪಾತ್ರವನ್ನು ಸಂಪಾದಿಸಿದರೂ, ಅದು ರಾಕ್ಷಸನ ತೀಕ್ಷ್ಣ ದೃಷ್ಟಿಗೆ ಕಾಣದಂತೆ ಇಟ್ಟುಕೊಳ್ಳುವುದು ಹೇಗೆ? ಇದಕ್ಕೇನು ಮಾಡುವುದೆಂದು ಬಹಳ ಆಲೋಚನೆ ಮಾಡಿದರು. ಇದಕ್ಕೂ ಬುದ್ಧಿವಂತೆಯಾದ ಸುಕೇಶಿನಿಯೇ ಒಂದು ಉಪಾಯ ಕಂಡುಹಿಡಿದಳು.

ಮಾರುದಿನ ರಾಕ್ಷಸನನ್ನು ಕರೆದುಕೊಂಡು ಬರುವುದಕ್ಕೆ ಮೊದಲು ಸುಕೇಶಿನಿ ತೋಟದೊಳಗೆ ಹೋಗಿ, ಮಂತ್ರಜಲದಿಂದ ತನ್ನ ಸೀರೆಯ ಒಂದು ಕೊನೆಯನ್ನು ಚೆನ್ನಾಗಿ ನೆನೆಯಿಸಿಕೊಂಡಳು. ಆ ಸೀರೆಯ ಇನ್ನೊಂದು ಕೊನೆಯನ್ನು ಸರೋವರದ ನೀರಿನಿಂದ ನೆನೆಯಿಸಿದಳು.

ಹೀಗೆ ಸಿದ್ಧಳಾದ ಸುಕೇಶಿನಿ ರಾಕ್ಷಸನ ಬಳಿಗೆ ಹೋಗಿ, "ಈದಿನ ಇಲ್ಲಿ ಕಾವಲಾಗಿ ನಾನು ಇರುತ್ತೇನೆ. ನೀನು ಹೋಗಿ ಆಟಪಾಟ ನೋಡಿ ಬಂದು, ಏನೇನು ಆಟಗಳು ಚೆನ್ನಾಗಿದ್ದುವೆಂದು ನನಗೆ ಹೇಳಬೇಕು. ನನಗೆ ಕಾಲು ಸ್ವಲ್ಪ ನೋವು. ಆದುದರಿಂದ ಈದಿನ ನಾನಿಲ್ಲೇ ಕಾವಲಿರುತ್ತೇನೆ" ಎಂದಳು.

"ಹಾಗೇ ಆಗಲಿ." ಎಂದು ಹೇಳಿ ರಾಕ್ಷಸನು ಸ್ವಲ್ಪವೂ ತಡಮಾಡದೆ ಸರೋವರದ ಕಡೆಗೆ ಬೇಗ ಬೇಗನೆ ಹೊರಟ. ಅವನನ್ನು ಕಂಡಕೂಡಲೇ ಸರೋವರದಲ್ಲಿದ್ದ ಹಂಸರೂಪಿಗಳಾದ ಕುಮಾರಿಯರೆಲ್ಲಾ ಮೇಲೆ ಬಂದು ಹಾಡುತ್ತ, ನಲಿದಾಡತೊಡಗಿದರು. ರಾಕ್ಷಸನೂ ತಲ್ಲೀನನಾಗಿ ನೋಡತೊಡಗಿದ.

ರಾಕ್ಷಸನು ಕಣ್ಮರೆಯಾಗಿ ಹೋದ ಮರುಕ್ಷಣವೇ ಸುಕೇಶಿನಿ. ತ್ರಿವಳಿ ಸಹೋದರರ ಶಿಲಾಪ್ರತಿಮೆಗಳ ಮೇಲೆ, ತಾನು ನೆನೆಯಿಸಿ ತಂದ ಮಂತ್ರಜಲವನ್ನು ಹಿಂಡಿದಳು. ಕೂಡಲೇ ಆ ಮೂವರಿಗೂ ನಿಜರೂಪಗಳು ಬಂದುವು. ಅವರು ಸುಕೇಶಿನಿಯನ್ನು ನೋಡಿ ಅತ್ಯಾಶ್ಚರ್ಯದಿಂದ, "ಇದೇನು? ನಾವೆಲ್ಲಿದ್ದೇವೆ? ನೀನು ಇಲ್ಲಿಗೆ ಹೇಗೆ ಬಂದೆ? ಆ ರಾಕ್ಷಸನೇನಾದ? ನಾವು ಮೂವರೂ ಇಲ್ಲಿರುವೆವಲ್ಲಾ? ಏನಿದೆಲ್ಲಾ?" ಎಂದು ಕೇಳಿದರು.

ಸುಕೇಶಿನಿ ತಾನು ಮಾಡಿದ ತಂತ್ರಗಳನ್ನೆಲ್ಲಾ ಬೇಗ ಬೇಗನೆ ವಿವರಿಸಿ ಹೇಳಿ, "ಅವನು ಆಟಪಾಟಗಳಲ್ಲಿ ಪರವಶನಾಗಿರುವ ಸಮಯವನ್ನು ನೋಡಿ, ಹೊಂಚು ಹಾಕಿ ಹತಮಾಡಿಬಿಡಬೇಕು. ಅದಕ್ಕೆ ಏನು ಮಾಡಬೇಕೆಂಬುದನ್ನು ನೀವು ಆಲೋಚಿಸಬೇಕು. ನಮಗೊಂದೂ ತೋರುವುದಿಲ್ಲ." ಎಂದಳು.

"ಏನು ಉಪಾಯವೋ? ನಮಗೆ ಕೂಡಾ ಏನೂ ತೋರದಂತಾಗಿದೆ. ಮಾಯದ ಭಸ್ಮವಿತ್ತು, ಅದೂ ಹೋಯಿತು." ಎಂದ ಉದಯನ. ಭಸ್ಮದ ಸಂಗತಿಯನ್ನು ಮರೆತಿದ್ದ ಸುಕೇಶಿನಿಗೆ, ಉದಯನನ ಮಾತಿನಿಂದ ನೆನಪಿಗೆ ಬಂದು, "ಅಂದಹಾಗೆ ಒಂದು ಮಾಡೋಣ. ಈದಿನ ನಿಮ್ಮನ್ನು ಮೊದಲಿನ ಹಾಗೇ ಶಿಲಾಪ್ರತಿಮೆ ಮಾಡಿಬಿಡುತ್ತೇನೆ. ಇಲ್ಲದಿದ್ದರೆ ಕೆಲಸ ಕೆಡುತ್ತದೆ. ನಾಳೆ ಬರುವಾಗ ನಾನು ಆ ಮಾಯದ

ಭಸ್ಮದ ಡಬ್ಬಿ ಕೂಡಾ ತರುತ್ತೇನೆ." ಎಂದಳು. "ಅದು ಹೇಗೆ? ಎಲ್ಲಿಂದ ತರುತ್ತಿ?" ಎಂದು ಅವರು ಕೇಳಲು, "ನಾವು ಅಡಗಿಸಿಟ್ಟಿದ್ದೇವೆ" ಎಂದು ಉತ್ತರ ಕೊಟ್ಟು, ಸರೋವರದ ಜಲದಿಂದ ಒದ್ದೆಯಾದ ಸೀರೆಯ ಕೊನೆಯನ್ನು ಮೂವರು ಕುಮಾರರ ಬಾಯಿಗೂ ಹಿಂಡಿಬಿಟ್ಟಳು. ಆಕೂಡಲೇ ಅವರು ಮೊದಲಿನಂತೆ ಶಿಲಾಪ್ರತಿಮೆಗಳಾದರು.

ಅಷ್ಟರಲ್ಲಿ ರಾಕ್ಷಸನು ಅಲ್ಲಿಗೆ ಬಂದು, "ಎಷ್ಟಾದರೂ ನೀನು ಇದ್ದರೇನೇ ಆಟಕ್ಕೆ ರುಚಿ. ನೀನಿಲ್ಲದ್ದರಿಂದ ಆಟವೆಲ್ಲಾ ಬರೀ ಸಪ್ಪೆ. ನಾಳೆ ಚೆಂದಾಗಿ ಆಡಲು ಕಾಲು ನೋವು ಸರಿಯಾದೀತಷ್ಟೆ?" ಎಂದ ಸುಕೇಶಿನಿಯೊಂದಿಗೆ.

"ಹೌದೇನಯ್ಯ! ಸುಮ್ಮನೆ ನನ್ನನ್ನು ಮುಖಸ್ತುತಿ ಮಾಡುವಿಯೋ ಏನೋ? ನನಗೂ ಇಲ್ಲಿ ಒಬ್ಬಳೇ ಇರುವುದು ಬೇಸರವೇ ಬಂತು ಬಿಡು. ನಾಳೆ ನನ್ನಕ್ಕ ನನ್ನು ಕಾವಲಿಗಿಟ್ಟು ನಾನೇ ಆಟದ ಸಭೆಯಲ್ಲಿರು ತ್ತೇನೆ, ಕೂಡಿದಷ್ಟು ಕುಣಿಯುತ್ತೇನೆ, ಹಾಡುತ್ತೇನೆ ಆಯಿತಷ್ಟೆ?" ಎಂದಳು ಸುಕೇಶಿನಿ.

ರಾಕ್ಷಸನನ್ನು ಅಲ್ಲಿ ಬಿಟ್ಟು ಸುಕೇಶಿನಿ ಸರೋವರದ ಬಳಿಗೆ ಹೋಗಿ ತನ್ನವರನ್ನು ಸೇರಿಕೊಂಡಳು. ಮೂವರು ರಾಜಕುಮಾರಿಯರೂ ಭಸ್ಮದ ಡಬ್ಬಿಯನ್ನು ತರಲು ಅದನ್ನು ಹುಗಿದ ಸ್ಥಳಕ್ಕೆ ಹೋದರು. ನೆಲದಲ್ಲಿ ತೋಡಿ ನೋಡಿದರೆ, ಆ ಡಬ್ಬಿ ಅಲ್ಲಿ ಕಾಣಿಸಲಿಲ್ಲ! ಅದು ಹೇಗೆ ಮಾಯವಾಯಿತು? ಮೂವರೂ ಮುಖಮುಖ ನೋಡಿಕೊಂಡರು. ಆಗ ಸುಕೇಶಿನಿ, "ಯೋಚನೆ ಮಾಡುತ್ತ ಕುಳಿತರೆ ಪ್ರಯೋಜನವಿಲ್ಲ. ನಾಳೆ ಭವನದ ಕಾವಲಿಗೆ ನೀನು ಹೋಗು. ನಾನು ಮಾಡಿದ ಹಾಗೇ ಮಾಡಿ, ಅವರ ಹತ್ತಿರ ಇಲ್ಲಿ ನಡೆದ ಸಂಗತಿಯನ್ನೆಲ್ಲ ಹೇಳು. ಭಸ್ಮದ ಡಬ್ಬಿಯ ಆಶೆಯಿಲ್ಲವೆಂದೂ ಹೇಳು. ಆಮೇಲೆ ಅವರು ಹೇಳಿದಂತೆ ಮಾಡೋಣ" ಎಂದು ಸುಭಾಷಿಣಿ



ಯೊಡನೆ ಹೇಳಿದಳು. ಅದೇ ಸರಿಯೆನಿಸಿತು ಎಲ್ಲರಿಗೂ. ಅದರಂತೆ ಮರುದಿನ ಸುಭಾಷಿಣಿ ಸರೋವರ ಜಲದಿಂದಲೂ, ಮಂತ್ರಜಲದಿಂದಲೂ ಸೀರೆಯ ಕೊನೆಗಳನ್ನು ನೆನೆಯಿಸಿಕೊಂಡು, ಭವನದ ಕಡೆಗೆ ಹೋಗಿ ರಾಕ್ಷಸನನ್ನು ಆಟಪಾಟ ನೋಡಲು ಕಳುಹಿಸಿ ಕೊಟ್ಟಳು. ಅವನು ಹೋದಮೇಲೆ ಸುಭಾಷಿಣಿ ಮಂತ್ರಜಲದಿಂದ ನೆನೆದ ಸೀರೆಯ ಭಾಗವನ್ನು ಶಿಲಾ ಪ್ರತಿಮೆಗಳ ಮೇಲೆ ಹಿಂಡಿದಳು. ಅದರಿಂದ ಶಿಲಾ ಪ್ರತಿಮೆಗಳಿಗೆ ನಿಜರೂಪ ಬಾರದಿರಲು, ತಾನು ಹಿಂಡಿದ್ದು ಸರೋವರದ ನೀರೆಂದು, ತನ್ನ ತಪ್ಪನ್ನು ಅರಿತು, ಇನ್ನೊಂದು ಕೊನೆಯ ಜಲವನ್ನು ಮತ್ತೊಮ್ಮೆ ಹಿಂಡಿದಳು. ಕೂಡಲೇ ಸೋದರರು ಮೂವರೂ ನಿಜರೂಪದಿಂದ ಪ್ರತ್ಯಕ್ಷರಾದರು.

ಅವರೊಂದಿಗೆ ಸುಭಾಷಿಣಿ ಚಡಪಡಿಸುವವಳಂತೆ ಭಸ್ಮದ ಡಬ್ಬಿ ಕಾಣೆಯಾದುದನ್ನೂ, ಪುನಃ ಶಿಲೆಗಳಾ ಗಿಸುವಂತಹ ಸರೋವರದ ನೀರು ತನ್ನ ತಪ್ಪಿನಿಂದ

ವ್ಯರ್ಥವಾದುದನ್ನೂ ತಿಳಿಸಿದಳು. ಅದನ್ನು ಕೇಳಿ ಉದಯನನು, "ಹೀಗಾಯಿತೇ? ಇದನ್ನೆಲ್ಲಾ ನೋಡುವಾಗ ನಾವು ತಲೆಹಾಕಿದ ಕೆಲಸವಾವುದೂ ಜಯಪ್ರದವಾಗುವಂತೆ ಕಾಣುವುದಿಲ್ಲ. ಇಲ್ಲದಿದ್ದರೆ ಅಡಿಗಡಿಗೆ ಹೀಗಾಗುತ್ತಿತ್ತೇ ?" ಎಂದ ವೈರಾಗ್ಯದಿಂದ.

ಅದನ್ನು ಕೇಳಿ ನಿಶೀಥನು, "ಜಯಪ್ರದವಾಗಿಲ್ಲವೆಂದರೆ ನಾನು ಒಪ್ಪಲಾರೆ. ದೇವರು ನಮ್ಮನ್ನು ಪರೀಕ್ಷಿಸುತ್ತಾನೆ. ಇಷ್ಟೊಂದಕ್ಕೆ ಹೆದರಿಬಿಟ್ಟರೆ ಹೇಗೆ ?" ಎಂದ.

"ಸರಿ, ಈಗ ರಾಕ್ಷಸನು ಹಿಂದಿರುಗಿ ಬರುವುದರೊಳಗೆ ನಾವು ತಪ್ಪಿಸಿಕೊಳ್ಳಬೇಕಾಗಿದೆ. ಇಲ್ಲದಿದ್ದರೆ.." ಎಂದು ಏನೋ ಹೇಳುವುದರೊಳಗೆ ಸುಭಾಷಿಣಿ ಅವನನ್ನು ತಡೆದು, "ನನಗೊಂದು ಉಪಾಯ ತೋರುತ್ತದೆ. ಇಲ್ಲಿರುವ ಆ ಮೂರು ಪ್ರತಿಮೆಗಳನ್ನು ತಂದು ನೀವಿದ್ದ ಸ್ಥಳದಲ್ಲೇ ಇಟ್ಟುಬಿಡುವಾ. ಆ ರಾಕ್ಷಸ ದೊಡ್ಡಾನೆಯಂತಹ ಶರೀರದವನೇ ಹೊರತು ತಲೆ ಮಾತ್ರ ಶುದ್ಧ ಕೆಸರುಮುದ್ದೆ. ಆದುದರಿಂದ ಪ್ರತಿಮೆಗಳು ಬದಲಾದುದನ್ನು ಎಷ್ಟುಮಾತ್ರಕ್ಕೂ ಕಂಡುಹಿಡಿಯಲಾರ. ನೀವು ಹೊರಗೆ ಆ ಪೊದರಿನ ಮರೆಯಲ್ಲಿ ಅಡಗಿಕೊಳ್ಳಿರಿ. ಅವನು ಭವನದೊಳಗೆ ಹೋದಮೇಲೆ ನೀವು ಹೊರಗೆ ಬಂದುಬಿಡಿ. ಆಮೇಲೆ ಉಳಿದ ಸಂಗತಿ ನೋಡೋಣ" ಎಂದಳು.

ಸುಭಾಷಿಣಿ ಹೇಳಿದ ಈ ಉಪಾಯ ಬಹು ಚೆನ್ನಾಗಿದೆಯೆನಿಸಿತು. ಮೂವರು ಸಹೋದರರೂ ಸುಭಾಷಿಣಿ ಕೂಡಾ ಸೇರಿ, ಮೂರು ಶಿಲಾಪ್ರತಿಮೆಗಳನ್ನು ತಂದು ಇಡಬೇಕಾದಲ್ಲಿ ಇಟ್ಟರು. ಸುಭಾಷಿಣಿ ಕಾವಲಿಗೆ ನಿಂತಮೇಲೆ ಮೂವರು ಸೋದರರೂ ಹೊರಗೆ ಜಾರಿಕೊಂಡು ಪೊದರಿನ ಮರೆಯಲ್ಲಿ ಸದ್ದಿಲ್ಲದೆ ಅಡಗಿ ಕುಳಿತರು.

ಸ್ವಲ್ಪಹೊತ್ತಿಗೆ ರಾಕ್ಷಸನು ತಿರುಗಿ ಬಂದು, ಸುಭಾಷಿಣಿಯನ್ನು ಕಳುಹಿಸಿಕೊಟ್ಟನು. ಕೂಡಲೇ ಸುಭಾಷಿಣಿ ಪೊದೆಯ ಹಿಂದೆ ಅಡಗಿರುವ ಮೂವರು ಸಹೋದರರೊಂದಿಗೆ ಕೂಡಿಕೊಂಡಳು.

ಈಗ ಮೂವರು ಸಹೋದರರೂ ಶಿಲಾಪ್ರತಿಮೆಗಳಿಂದ ಮುಕ್ತರಾದರೂ, ಮುಂದಿನ ಸಂಗತಿ ಹೇಗೆಂಬುದನ್ನು ನೆನೆಯುವಾಗ, ಪ್ರತಿ ಕ್ಷಣವೂ ಗಂಡಾಂತರಕಾರಿಯಾಗಿರುವಂತೆ ಕಾಣಿಸಿ, ಅವರ ತಲೆ ಚಿಟ್ಟು ಹಿಡಿಯಿತು. ತಪ್ಪಿಸಿಕೊಂಡು ಇದ್ದಷ್ಟು ದಿನವೂ ಪಾರಾದಂತೆ. ಮರುದಿನ ಹೇಗೋ? ದಿನದಿನ ಗಂಡವೂ ದೀರ್ಘಾಯುಸ್ಸೂ ಇದ್ದಹೊರತು ಉಳಿಯುವಂತಿಲ್ಲವೆಂಬ ಏನೋ ಒಂದು ಮೊಂಡಿ ಧೈರ್ಯದಿಂದ ಇರತೊಡಗಿದ್ದಾರೆ. ಸುಭಾಷಿಣಿಯೂ ಧೈರ್ಯದಲ್ಲೇನೂ ಕಡಿಮೆಯವಳಲ್ಲ.

— (ಇನ್ನೂ ಇದೆ)





# ವೀರಹನುಮಾನ್

June 1975

ಎಲ್ಲಾ ವಾನರರಿಗಿಂತಲೂ ಹನುಮಂತನಲ್ಲಿ ಕಾರ್ಯವನ್ನು ಸಾಧಿಸುವ ಶಕ್ತಿಯೂ ಅದಕ್ಕೆ ತಕ್ಕ ಅವಕಾಶವೂ ಹೆಚ್ಚಾಗಿರುವುದನ್ನು ತಿಳಿದು ಸುಗ್ರೀವನು, ಹನುಮಂತನನ್ನು ಪ್ರತ್ಯೇಕವಾಗಿ ಕರೆದು ಹೀಗೆಂದನು:

"ಹನುಮಂತಾ, ನಿನ್ನಮೇಲೆ ನನಗೇಕೋ ಹೆಚ್ಚಿನ ವಿಶ್ವಾಸ ಮೂಡುತ್ತಿದೆ. ನೀನು ಮಹಾವೀರನಾಗಿರುವಿ. ಅದರಮೇಲೆ ಗಾಳಿಯಲ್ಲಿಯೂ, ನೀರಿನಲ್ಲಿಯೂ, ನೆಲದಲ್ಲಿಯೂ, ಆಕಾಶದಲ್ಲಿಯೂ ಸಂಚರಿಸುವ ವಿಶೇಷ ಶಕ್ತಿ ನಿನಗಿದೆ. ನಿನಗೆ ತಿಳಿಯದ ಲೋಕವಾಗಲಿ, ಸಮುದ್ರವಾಗಲಿ, ಪರ್ವತವಾಗಲಿ ಯಾವುದೂ ಇಲ್ಲ. ನೀನು ವಾಯುದೇವನಂತಹ ವೇಗವಾದ ಗಮನಶಕ್ತಿಯುಳ್ಳವನು. ಭೂಮಿಯಲ್ಲಂತೂ ನಿನ್ನನ್ನು ಮೀರಿಸುವ ಬಲಶಾಲಿ ಯಾರೂ ಇಲ್ಲ. ಆದುದರಿಂದ ಸೀತಾದೇವಿಯನ್ನು ಹುಡುಕಿ ಕಂಡುಹಿಡಿಯುವ ಕಾರ್ಯವು ನಿನ್ನಿಂದಲೇ ನೆರವೇರುವುದೆಂದು ನನಗೆ ಕಾಣುತ್ತದೆ. ಬಲವೂ ಬುದ್ಧಿಯೂ ದೇಶ ಕಾಲಾನುಗುಣವಾಗಿ ಪ್ರವರ್ತಿಸುವ ವಿವೇಕವೂ ಪರಾಕ್ರಮವೂ ನಿನ್ನಲ್ಲಿರುವ ಹಾಗೆ ಬೇರೆ ಯಾರಲ್ಲಿಯೂ ಕಾಣುವುದಿಲ್ಲ. ಸ್ನೇಹಿತನಿಗೆ ನಾನು ಕೊಟ್ಟ ಮಾತು, ನನ್ನ ಪ್ರತ್ಯುಪಕಾರ ನಿನ್ನಿಂದಲೇ ಸಾಧ್ಯವಾಗುವಂತಾಗಬೇಕು. ಹೋಗಿ ಕಾರ್ಯವನ್ನು ಸಾಧಿಸಿಯೇ ಬಾರಯ್ಯ."

ಹೀಗೆ ಸುಗ್ರೀವನು ಹನುಮಂತನೊಂದಿಗೆ ಹೇಳುವುದನ್ನು ಕೇಳಿ ರಾಮನು, ಕಾರ್ಯಭಾರವನ್ನು ಹನುಮಂತನ ಮೇಲೆಯೇ ಸುಗ್ರೀವನು ಹಾಕುವುದನ್ನು ಗಮನಿಸಿದನು. ಹನುಮಂತನ ಶಕ್ತಿಸಾಮರ್ಥ್ಯಗಳು ಸುಗ್ರೀವನಿಗೆ ಚೆನ್ನಾಗಿ ಗೊತ್ತಿರಬೇಕೆಂದು ತೋರಲು, ರಾಮನ ಆಶೆಗಳೆಲ್ಲಾ ಹನುಮಂತನ ಮೇಲೆ ತಿರುಗಿತು. ಅಂತೆಯೇ ರಾಮನು ತನ್ನ ಹೆಸರಿನ ಉಂಗುರವನ್ನು ಹನುಮಂತನಿಗೆ ಕೊಡುತ್ತ, "ವಾನರ ಶ್ರೇಷ್ಠನಾದ ಹನುಮಾನ್, ಈ ಉಂಗುರವನ್ನು ನೋಡಿದರೆ ಸೀತಾದೇವಿ ನಿನ್ನನ್ನು ನೋಡಿ ಹೆದರುವುದಿಲ್ಲ. ಸಂದೇಹಪಡಲಾರಳು. ನೀನು ನನ್ನ ಸಂದೇಶದೊಂದಿಗೆ ಬಂದವನೆಂದು ಗುರುತು ಹಿಡಿಯುತ್ತಾಳೆ. ನಿನ್ನಿಂದಲೇ ಕಾರ್ಯಸಾಧನೆಯಾಗುವುದೆಂದು ಸುಗ್ರೀವನ ಮಾತಿನ

## ೮. ಸ್ವಯಂಪ್ರಭೆಯ ಕಥೆ



ಮೂಲಕವಾಗಿ ನನಗೆ ತೋರುತ್ತದೆ. ಆದುದರಿಂದಲೇ ಈ ಗುರುತುಗಳನ್ನು ನಿನ್ನ ಕೈಗೆ ಕೊಡುತ್ತೇನೆ. ಆದಷ್ಟು ಬೇಗ ಶುಭ ಸಮಾಚಾರದೊಂದಿಗೆ ಹಿಂದಿರುಗಿ ಬರುವವನಾಗು " ಎಂದನು.

ಹನುಮಂತನು ಆ ಉಂಗುರವನ್ನು ತೆಗೆದುಕೊಂಡು ಕೈಗಳನ್ನು ತಲೆಯಮೇಲೆ ಜೋಡಿಸಿ ರಾಮನ ಪಾದಗಳಿಗೆ ಪ್ರಣಾಮ ಮಾಡಿ, ಪ್ರಯಾಣ ಹೊರಟನು. ಆಗ ರಾಮನು ಅವನೊಂದಿಗೆ ಮತ್ತೊಂದು ಸಾರಿ, " ಹನುಮಂತಾ, ನಾನು ನಿನ್ನ ಶಕ್ತಿಯನ್ನೇ ನಂಬಿಕೊಂಡಿರುತ್ತೇನೆ. ನನಗೆ ಸುಗ್ರೀವನಂತಹ ಮಹಾನುಭಾವನ ಸಖ್ಯ ಮಾಡಿಸಿದವನೇ ನೀನೆಂಬುದನ್ನು ಮರೆಯಲಾರೆ. ನೀನು ಶಕ್ತಿವಂಚನೆಯಿಲ್ಲದೆ ಪೂರ್ಣ ಶ್ರದ್ಧೆಯಿಂದ ಸೀತಾದೇವಿಯನ್ನು ಹುಡುಕಿ ಕಂಡು ಹಿಡಿಯಬೇಕು " ಎಂದನು.

ಹನುಮಂತನು ಮತ್ತೊಮ್ಮೆ ರಾಮನಿಗೆ ನಮಸ್ಕಾರ ಮಾಡಿ ಹೊರಟನು. ವಾನರರ ದಂಡು ಮಿಡಿತೆಗಳ ದಂಡಿನಂತೆ ಎಲ್ಲಾ ದಿಕ್ಕುಗಳಿಗೂ ಹೊರಟಿತು. ಅವರು ಹಿಂದಿರುಗಿ ಬರಲು ಒಂದು ತಿಂಗಳು ಮಾತ್ರ ಗಡುವಿತ್ತು. ಅಷ್ಟರೊಳಗೆ ಹಣ್ಣೋ ಕಾಯೋ ಗೊತ್ತಾಗಬೇಕಿತ್ತು.

ವಾನರರು ಹೊರಟುಹೋದ ಮೇಲೆ ರಾಮಲಕ್ಷ್ಮಣರು ಪ್ರಸ್ರವಣ ಪರ್ವತದ ಮೇಲಿನ ಗುಹೆಯಲ್ಲಿರುತ್ತ, ಶೋಧಿಸಲು ಹೊರಟ ವಾನರರು ಹಿಂದಿರುಗಿ ಬರುವುದನ್ನು ನಿರೀಕ್ಷಿಸುತ್ತ, ದಿನಗಳನ್ನು ಎಣಿಸತೊಡಗಿದರು.

ವಿನತನೆಂಬ ವಾನರನೊಂದಿಗೆ ಹೊರಟ ಬೃಂದವು ಪೂರ್ವದಿಕ್ಕಿಗೆ ಹೋಯಿತು. ಸುಷೇಣನು ತನ್ನ ಬೃಂದದೊಂದಿಗೆ ಪಶ್ಚಿಮ ದಿಕ್ಕಿಗೆ ಹೋದನು. ಹಾಗೆಯೇ ಇನ್ನೊಂದು ವಾನರರ ದೊಡ್ಡ ಸಮೂಹ ಉತ್ತರ ದಿಕ್ಕಿಗೂ ಹೋಯಿತು. ಹನುಮಂತ, ತಾರ, ಅಂಗದ ಮೊದಲಾದವರು ತಮ್ಮ ಗುಂಪಿನೊಂದಿಗೆ ದಕ್ಷಿಣ ದಿಕ್ಕಿಗೆ ಹೊರಟರು.

ಎಲ್ಲರನ್ನೂ ಎಲ್ಲ ದಿಕ್ಕುಗಳಿಗೂ ಕಳುಹಿಸಿ, ಸುಗ್ರೀವನು ರಾಮನಿಗೆ ತಾನು ಕೊಟ್ಟ ಮಾತನ್ನು ಕಾಪಾಡಿದೆನೆಂಬ ಸಂತೃಪ್ತಿಯಿಂದ ನಿಶ್ಚಿಂತನಾಗಿ, ತನ್ನ ಅರಮನೆಯೊಳಗೆ ಹೊಕ್ಕು ಮೊದಲಿಗಿಂತ ಹೆಚ್ಚಿನ ಸುಖಭೋಗಗಳಲ್ಲಿ ಓಲಾಡ ತೊಡಗಿದನು.

ಸುಗ್ರೀವನಿಂದ ಕಳುಹಿಸಲ್ಪಟ್ಟ ವಾನರರು ತಮ್ಮ ತಮ್ಮ ದಿಕ್ಕುಗಳಲ್ಲಿ ಸೀತಾದೇವಿಯನ್ನು ಬಹಳ ಶ್ರದ್ಧೆಯಿಂದ ಹುಡುಕಿದರು. ಹಗಲೆಲ್ಲಾ ಪ್ರತಿ ಸರೋವರ, ನದಿ, ಬಾವಿ, ಪೊದೆ, ವನ, ಗುಡ್ಡ, ಗುಹೆ ಮೊದಲಾದ ಕಷ್ಟ ಇಕ್ಕಟ್ಟುಗಳ ಪ್ರದೇಶದಲ್ಲೆಲ್ಲಾ ಹುಡುಕುತ್ತ, ರಾತ್ರಿಯಾಗುತ್ತಲೇ ಒಂದೇ ಸ್ಥಳದಲ್ಲಿ ಸೇರುತ್ತ, ಯಾವ ಮರಗಳ ಕೆಳಗೋ ರಾತ್ರಿಯನ್ನು ಕಳೆಯುತ್ತ ಮುಂದಕ್ಕೆ ಸಾಗುತ್ತಿದ್ದರು.

ಪೂರ್ವ ಪಶ್ಚಿಮ, ಉತ್ತರ ದಿಕ್ಕುಗಳಿಗೆ ಹೋದ ವಾನರರು ಒಂದು ತಿಂಗಳ ಗಡುವಿನೊಳಗೆ ಹಿಂದಿರುಗಿ

ಬಂದು ಸೀತೆಯ ಜಾಡು ಎಲ್ಲಿಯೂ ತಿಳಿಯಲಿಲ್ಲ ವೆಂದು ಸುಗ್ರೀವನೊಂದಿಗೆ ಹೇಳಿದರು. ಆ ಸಮಯ ದಲ್ಲಿ ಸುಗ್ರೀವನು ಪ್ರಸ್ರವಣ ಪರ್ವತದ ಮೇಲೆ ರಾಮನ ಪಕ್ಕದಲ್ಲೇ ಕುಳಿತಿದ್ದನು. ವಾನರರು ತಂದ ಸುದ್ದಿ ಕೇಳಿ ರಾಮನು ಚಿಂತೆಯನ್ನು ಸೂಚಿಸುವ ದೀರ್ಘವಾದೊಂದು ನಿಟ್ಟುಸಿರು ಬಿಟ್ಟನು.

ಸುಗ್ರೀವನು ತಕ್ಕ ರೀತಿಯಲ್ಲಿ ಸಮಾಧಾನ ಹೇಳಿದನು. ಇನ್ನೂ ಪೂರ್ತಿ ನಿರಾಶೆಯಾಗಲಿಲ್ಲವಷ್ಟೆ? ದಕ್ಷಿಣ ದಿಕ್ಕಿಗೆ ಹೋದವರಾರೂ ಹಿಂದಿರುಗಿ ಬಂದಿಲ್ಲ. ಸೀತೆಯನ್ನು ಅಪಹರಿಸಿಕೊಂಡು ಹೋದ ರಾವಣನು ದಕ್ಷಿಣ ದಿಕ್ಕಿಗೇ ಹೋಗಿದ್ದಾನೆ. ಅವನ ರಾಜ್ಯವೂ ದಕ್ಷಿಣದಿಕ್ಕಿನಲ್ಲಿದೆ. ಆದುದರಿಂದ ಅಲ್ಲಿಂದ ಶುಭ ಸಮಾಚಾರ ಬರುವ ನಿರೀಕ್ಷೆ ಇನ್ನೂ ಇದೆ. ಯಾವನ ಕೈಯಲ್ಲಿ ರಾಮನ ಗುರುತಿನ ಉಂಗುರವಿದೆಯೋ ಆ ಹನುಮಂತನು ಸೀತೆಯನ್ನು ನೋಡಿಯೇ ಹಿಂದಿರುಗುವನೆಂದು ಸುಗ್ರೀವನು ರಾಮನಿಗೆ ಒತ್ತಿ ಹೇಳಿದನು.

ದಕ್ಷಿಣ ದಿಕ್ಕಿಗೆ ಹೋದ ಹನುಮಂತನೇ ಮೊದಲಾದವರು ಸೀತೆಯನ್ನು ಹುಡುಕುತ್ತಾ, ವಿಂಧ್ಯ ಪರ್ವತ ಪ್ರಾಂತವನ್ನು ತಲಪಿದರು. ಅದು ಬಹಳ ವಿಸ್ತಾರವಾದ ಪ್ರದೇಶ. ಅಲ್ಲಿ ಎಷ್ಟೋ ಗುಹೆಗಳಿವೆ, ಕೊಳ್ಳಗಳಿವೆ, ಶಿಖರಗಳಿವೆ, ಕಾಡುಗಳಿವೆ; ದಾಟಲಿಕ್ಕೆ ಕಷ್ಟವಾದ ನದಿಗಳಿವೆ; ಆಕಾಶಕ್ಕೆ ಮುತ್ತಿಡುವಂತಹ ಮರಗಳೆಷ್ಟೋ ಇವೆ. ವಾನರರು ಹಣ್ಣು, ಕಾಯಿ, ಗಡ್ಡೆ ಗೆಣಸುಗಳನ್ನು ತಿನ್ನುತ್ತ ಒಂದೊಂದು ಪ್ರದೇಶವನ್ನಾಗಿ ನೋಡುತ್ತ ಮುಂದೆ ಮುಂದೆ ಸಾಗಿದರು.

ಒಂದಾನೊಂದು ಕಡೆಯಲ್ಲಿ ಏನೂ ಇಲ್ಲದ ಶೂನ್ಯ ಪ್ರದೇಶವೊಂದು ಹತ್ತಿತು. ಅಲ್ಲಿನ ಮರಗಳೆಲ್ಲಾ ಒಣಗಿ ಹೋಗಿದ್ದುವು. ನದಿಗಳಲ್ಲಿ ನೀರೇ ಇರಲಿಲ್ಲ. ಒಂದು ಚೂರು ಹುಲ್ಲೂ ಸಹ ಕಾಣಲಿಲ್ಲ. ಇನ್ನು ಗೆಡ್ಡೆ ಗೆಣಸುಗಳೆಲ್ಲಿಂದ ಬರಬೇಕು? ಒಂದೇ ಒಂದು ಪ್ರಾಣಿ—ಸಣ್ಣ ಹುಳು ಕೀಟ ಕೂಡಾ ಅಲ್ಲಿಲ್ಲ. ಅದೊಂದು



ಭಯಂಕರವಾದ ಪ್ರದೇಶ. ಅಂತಹ ಭಣಭಣಿಸುವ ಒಣಕಲು ಪ್ರದೇಶವನ್ನು ಕಂಡು ವಾನರರಿಗೆ ತಾವೆಲ್ಲಿಗೆ ಬಂದೆವೆಂದು ತಿಳಿಯದೆ ಭಯವಾಯಿತು.

ಅಂತಹ ಶೂನ್ಯವಾದ ವನಪ್ರದೇಶದಲ್ಲಿ ಹಿಂದೆ ಕಂಡುಮಹರ್ಷಿ ತಪಸ್ಸಿನಲ್ಲಿ ಕುಳಿತಿದ್ದ. ಅವನದೇ ಆಶ್ರಮ ಪ್ರದೇಶವದು. ಅವನಿಗೆ ಎಷ್ಟೊಂದು ತಪೋಬಲವಿದ್ದಿತೋ, ಅಷ್ಟೊಂದು ಕೋಪವೂ ಇದ್ದಿತು. ಹದಿನಾರು ವರ್ಷ ಪ್ರಾಯದ ತನ್ನ ಮಗನು ಅಕಾಲ ಮರಣವನ್ನು ಅಪ್ಪಿದುದರಿಂದ, ಅವನಿಗೆ ಆ ವನ ಪ್ರದೇಶದ ಮೇಲೆ ಕೋಪ ಬಂದು, ಅದೆಲ್ಲಾ ಒಣ ನೆಲವಾಗಿಹೋಗುವಂತೆ ಶಪಿಸಿಬಿಟ್ಟಿದ್ದನು. ಅಂತಹ ಶೂನ್ಯಪ್ರದೇಶದಲ್ಲಿ ಕೂಡಾ ಭೀತಿಯನ್ನು ಧೈರ್ಯದಿಂದ ಮೆಟ್ಟಿಕೊಂಡು ವಾನರರು ಸೀತಾದೇವಿಯನ್ನು ಹುಡುಕಿ ಪಾರಾದರು.

ಅಲ್ಲಿಂದ ಹುಡುಕುತ್ತಾ ಹೊರಟ ಆ ವಾನರ ಸಮೂಹವು ಇನ್ನೊಂದು ವಿಧವಾದ ಭೀತಿ



ಹುಟ್ಟಿಸುವ ಅರಣ್ಯದೊಳಗೆ ಪ್ರವೇಶ ಮಾಡಿತು. ಅಲ್ಲಿ ಅವರು ಕಣ್ಣಿನ ಮೇಲೆ ಕಣ್ಣಿಟ್ಟು ಹುಡುಕುವಾಗ ಅವರಿಗೊಬ್ಬ ರಾಕ್ಷಸನು ಕಾಣಿಸಿದ. ಮಹಾಕಾಯ ನಾದ ಆ ರಾಕ್ಷಸನನ್ನು ನೋಡಿದ ಕೂಡಲೇ, ವಾನರರು ದಟ್ಟಿ ಬಿಗಿದುಕೊಂಡು ಅವನೊಂದಿಗೆ ಯುದ್ಧಮಾಡಲು ಸಿದ್ಧರಾದರು.

ಆ ರಾಕ್ಷಸನು ಕೂಡಾ ವಾನರರನ್ನು ನೋಡಿದ ಕೂಡಲೇ "ನಿಮ್ಮೆಲ್ಲರನ್ನೂ ಕೊಂದುಬಿಡುತ್ತೇನೆ. ಬಹಳ ಕಾಲದವರೆಗೆ ಆಹಾರವಾಗಿ ಸಿಕ್ಕಿದಿರಿ" ಎನ್ನುತ್ತಾ ಅವರ ಕಡೆಗೆ ಓಡಿಬಂದ. ಅಂಗದನು ಅವನೇ ರಾವಣನೆಂದುಕೊಂಡು ಅವನ ತಲೆಯಮೇಲೆ ಬಲವಾಗಿ ಹೊಡೆದ. ಅಂಗದನ ಒಂದೇ ಏಟು ಅವನನ್ನು ಏಳಲಾಗದಂತೆ ನೆಲಕ್ಕೆ ಕೆಡವಿತು. ನೆಲ ತುಂಬ ನೆತ್ತರು ಕಕ್ಕುತ್ತ ಪ್ರಾಣ ಬಿಟ್ಟ ಆ ರಾಕ್ಷಸ.

ರಾವಣನು ಸತ್ತನೆಂದೂ, ಸೀತೆ ಇವನ ಗುಹೆ ಯೊಳಗೆಲ್ಲಿಯೋ ಇರಬಹುದೆಂದೂ ಊಹಿಸಿಕೊಂಡು ವಾನರರು, ಅಲ್ಲಿ ಕಾಣಿಸಿದ ಗುಹೆಗಳನ್ನೆಲ್ಲಾ ಹುಡುಕ ಲಾರಂಭಿಸಿದರು. ಎಲ್ಲಿಯೂ ಸೀತೆಯ ಜಾಡು ತಿಳಿಯ ಲಿಲ್ಲ. ಆ ಅರಣ್ಯವೆಲ್ಲಾ ಗಾಳಿಸಿದ್ದಾಯಿತು. ಎಲ್ಲಾ ನಿಷ್ಪ್ರಯೋಜನವಾಗಿಹೋಗಲು, ಎಲ್ಲ ವಾನರರೂ ಮುಂದೇನು ಮಾಡಲೂ ತೋರದೆ ಒಂದು ಮರದ ತಳದಲ್ಲಿ ಸೇರಿ ಕುಳಿತರು.

ಆಗ ಅಂಗದನು ಅವರನ್ನು ಕುರಿತು, "ನಾವು ಹುಡುಕಲು ಹೊರಟಂದಿನಿಂದ ಇವತ್ತಿನವರೆಗೆ ಎಷ್ಟೋ ಅರಣ್ಯಗಳು, ನದಿಗಳು, ಪರ್ವತಗಳು, ಗುಹೆಗಳು ಒಂದು ಬಿಡದೆ ಹುಡುಕಿದೆವು. ನಮಗೆ ಸೀತಾದೇವಿಯ ಜಾಡು, ಅವಳನ್ನು ಎತ್ತಿಕೊಂಡು ಹೋದ ರಾವಣನ ಸುಳಿವು ಯಾವುದೂ ತಿಳಿಯಲಿಲ್ಲ. ನಾವು ಕೊಂದ ರಾಕ್ಷಸನೇ ರಾವಣನೆಂದು ಸುಮ್ಮನೆ ಊಹಿಸಿದೆವು. ಸೀತಾದೇವಿಯನ್ನು ತಂದವನು ಅಷ್ಟು ಸುಲಭದಲ್ಲಿ ಸಾಯುವಂಥ ರಾಕ್ಷಸನಾಗಿರಲಾರ. ಸುಗ್ರೀವನ ಆಜ್ಞೆ ಅತ್ಯಂತ ದಾರುಣವಾದುದು. ನಾವು ಉತ್ಸಾಹವಿಲ್ಲದೆ ಅಲೆದಾಡಲಾರೆವು. ಸೋಮಾರಿತನವೂ ಪ್ರಯೋಜನವಿಲ್ಲ. ಆದುದರಿಂದ ನೀವೆಲ್ಲರೂ ಇನ್ನೊಂದು ಸಾರಿ ಈ ವನವನ್ನೆಲ್ಲಾ ಹುಡುಕಿರಿ. ನಾವೆಲ್ಲಾ ಈಗ ನಿದ್ರೆ ಕೂಡ ಮಾಡ ಬಾರದು. ಅಥವಾ ಒಳ್ಳೆಯ ದಾರಿ ಯಾವುದಾದರೂ ಇದ್ದರೆ ನೀವೇ ಹೇಳಿರಿ." ಎಂದನು. ಆಗ ಉಳಿದೆಲ್ಲರ ಪರವಾಗಿ ಗಂಧಮಾದನನು ಅಂಗದನು ಹೇಳಿದ ಮಾತನ್ನೇ ಬಲಪಡಿಸಿ ಹೇಳಿದನು.

ಈ ಅಭಿಪ್ರಾಯ ಬಲದಿಂದ ವಾನರರೆಲ್ಲ ತಮ್ಮ ಶ್ರಮವನ್ನು ಮರೆತು, ಹೊಸ ಉತ್ಸಾಹದಿಂದ ವಿಂಧ್ಯ ಪರ್ವತದ ಅರಣ್ಯಗಳಲ್ಲಿ ಮತ್ತೆ ಸೀತೆಯನ್ನು ಹುಡುಕಲು ತೊಡಗಿದರು.

ಹಾಗೆ ಹುಡುಕುತ್ತಾ, ಬೆಳ್ಳಿಯ ಶಿಖರದಂತಹ ಒಂದು ಬೆಟ್ಟದ ಮೇಲೆ ಹತ್ತಿ, ಅಲ್ಲೆಲ್ಲಿಯೂ ಸೀತೆ ಯನ್ನು ಕಾಣದೆ ನಿಟ್ಟುಸಿರು ಬಿಟ್ಟರು. ಎಲ್ಲರೂ

ಆ ಶಿಖರದಿಂದ ಕೆಳಗಿಳಿದು, ಸ್ವಲ್ಪ ಮಾತ್ರ ವಿಶ್ರಾಂತಿ ಪಡೆದು ಮತ್ತೆ ಹುಡುಕಲು ಪ್ರಾರಂಭಿಸಿದರು. ಅವರು ವಿಂಧ್ಯಪರ್ವತದ ಮೇಲೆ ಸೀತೆಯನ್ನು ಹುಡುಕುತ್ತಿರುವಾಗಲೇ, ಸುಗ್ರೀವನು ಇಟ್ಟ ಒಂದು ತಿಂಗಳ ಗಡು ದಾಟಿಹೋಯಿತು.

ವಾನರರು ಒಂದೊಂದು ಪ್ರದೇಶವನ್ನೇ ಹುಡುಕುತ್ತ ವಿಂಧ್ಯಪರ್ವತದ ನೈಋತಿ ದಿಕ್ಕಿನ ಕೊನೆಗೆ ಹೋದರು. ಇಲ್ಲಿಗೆ ಸೇರಿದ ವಾನರರಲ್ಲಿ ಪ್ರಮುಖರು ಹನುಮಂತ, ಗಜ, ಗವಾಕ್ಷ, ಗವಯ, ಶರಭ, ಗಂಧಮಾದನ, ಮೈಂದ, ದ್ವಿವಿಧ, ಸುಷೇಣ, ಜಾಂಬವಂತ, ನಳ, ಯುವರಾಜ ಅಂಗದ, ಮತ್ತು ತಾರ ಇವರೆಲ್ಲ ಇದ್ದರು. ಎಲ್ಲರೂ ಒಂದೇ ಬಗೆಯ ಸಾಹಸವಂತರೇ.

ಅವರು ಪ್ರತಿ ಗುಹೆಯನ್ನೂ ಶೋಧಿಸುತ್ತಾ ಒಂದು ದೊಡ್ಡ ಬಿಲದ ಬಳಿಗೆ ಬಂದರು. ಅದು ಋಕ್ಷ ಬಿಲವೆಂದು ಅವರಾರಿಗೂ ತಿಳಿಯದು. ಅದನ್ನು ಮಯನು ಅಲ್ಲಿ ನಿರ್ಮಿಸಿದ್ದನು. ಅದರ ದ್ವಾರದಲ್ಲಿ ಲತೆಗಳು ಬಲೆಯಂತೆ ಬೆಳೆದಿದ್ದುವು. ಪ್ರವೇಶಿಸಲು ಬಹಳ ಕಷ್ಟವಾದ ಗುಹೆ. ಅಲ್ಲಿಗೆ ಬಂದಾಗ ವಾನರರು ಹಸಿವೆಬಾಯಾರಿಕೆಗಳಿಂದ ತುಂಬ ಬಳಲಿಹೋಗಿದ್ದರು. ಎಲ್ಲಿಯೂ ನೀರು ಸಿಕ್ಕಿರಲಿಲ್ಲ. ಅವರೆಲ್ಲರ ಬಾಯಿ ಒಣಗಿ ನಾಲಗೆ ಅಂಗಳದಲ್ಲಿ ಅಂಟಿಕೊಂಡಿತ್ತು.

ಆ ಋಕ್ಷ ಬಿಲದೊಳಗಿನಿಂದ ಕ್ರೌಂಚ, ಹಂಸ, ಚಕ್ರವಾಕ ಮೊದಲಾದ ಕೆಲವು ನೀರು ಹಕ್ಕಿಗಳು ಹೊರಕ್ಕೆ ಹಾರುತ್ತಾ ಬರುತ್ತಿದ್ದುವು. ಅವುಗಳನ್ನು ನೋಡಿ ಹನುಮಂತನೇ ಮೊದಲಾದವರು ಬಹಳ ಆಶ್ಚರ್ಯಪಟ್ಟರು. ಎಲ್ಲರೂ ಬೇಗಬೇಗನೇ ಆ ಬಿಲದ ಬಳಿಗೆ ಹೋದರು.

ಪರ್ವತಗಳನ್ನೂ ಅರಣ್ಯಗಳನ್ನೂ ಕುರಿತು ವಿಶೇಷವಾಗಿ ತಿಳಿದಿದ್ದ ಹನುಮಂತನು ಉಳಿದವರೊಂದಿಗೆ ಹೀಗೆಂದನು :

"ನೋಡಿದಿರಾ ; ಈ ಗುಹೆಯ ಮುಖದಿಂದ ನೀರಿನ ಹಕ್ಕಿಗಳು ಹಾರಿ ಹಾರಿ ಬರುತ್ತಿವೆ. ಇದರ ದ್ವಾರದಲ್ಲಿ ಲತೆಗಳೂ ಮರಗಳೂ ಬೆಳೆದಿರಬೇಕಾದರೆ ಸಮೀಪದಲ್ಲಿ ಜಲಾಶಯವಿರಲೇಬೇಕು. ಅಥವಾ





ಗುಹೆಯೊಳಗೆ ನೀರುತುಂಬಿದ ಬಾವಿಯೋ ಕೊಳವೋ ಇರಬಹುದು. ನಾವಂತೂ ದಾಹದಿಂದ ಒಣಗಿ ಹೋಗಿದ್ದೇವೆ. ಆದುದರಿಂದ ಲತೆಗಳನ್ನು ಸರಿಸಿ ಬಿಲದೊಳಗೆ ಜಾಗರೂಕತೆಯಿಂದ ಹೋಗೋಣ.''

ಹನುಮಂತನು ಹೀಗೆ ಹೇಳಿದ ಕೂಡಲೇ ಆ ವಾನರರೆಲ್ಲ ಋಕ್ಷ ಬಿಲದೊಳಗೆ ಪ್ರವೇಶ ಮಾಡಿದರು. ಒಳಗೆ ಕಣ್ಣು ಕುತ್ತಿದರೂ ಕಾಣಲಾಗದಷ್ಟು ಕಗ್ಗತ್ತಲೆ. ವಾನರರು ತಾವು ಎತ್ತ ಹೋಗುತ್ತಿರುವೆವೆಂಬುದನ್ನು ಸಹಾ ಅರಿಯದೆ ತಡವುತ್ತಾ ಮುಂದೆ ಮುಂದೆ ಹೋದರು.

ಹೋಗಹೋಗುತ್ತಿದ್ದಂತೆ ಕತ್ತಲೆ ಕಡಿಮೆಯಾಗುತ್ತಾ ಕಾಂತಿ ಬರತೊಡಗಿತು. ಕಟ್ಟಕಡೆಗೆ ಶುಭ್ರ ಕಾಂತಿಯಿಂದೊಪ್ಪುವ ಅತ್ಯಂತ ಸುಂದರವಾದ ಪ್ರದೇಶವನ್ನು ಅವರು ತಲಪಿದರು.

ಅಲ್ಲಿ ಪ್ರಕಾಶವನ್ನು ಬೀರುವ ಕಾಂಚನ ಮರಗಳು, ತಾಳೆ, ಸುರಹೊನ್ನೆ, ಅಶೋಕ, ಚಂದನ ಮೊದಲಾದ ಮರಗಳು ತುಂಬಿದ್ದುವು. ಕೆಲವು ಮರಗಳ ಹೂ ಕಾಯಿ ಹಣ್ಣುಗಳು ಜಗಜಗಿಸುತ್ತ ಕಾಂತಿಯುಗುಳುತ್ತಿದ್ದುವು. ಅಲ್ಲಿ ಒಂದು ತಾವರೆಯ ಕೊಳದಲ್ಲಿ ಚಿನ್ನದ ತಾವರೆಗಳಿದ್ದುವು. ಆ ಕೊಳದಲ್ಲಿರುವ ಮೀನುಗಳೂ, ಆಮೆಗಳೂ, ಹಾವುಗಳೂ ಚಿನ್ನದ ಬಣ್ಣದವುಗಳೇ. ಅದು ಭೂಮಿಯೋ ಬೇರೆ ಯಾವುದೋ ಲೋಕವೋ ಎಂಬಂತಿತ್ತು.

ಇನ್ನೊಂದು ಕಡೆ ತಿರುಗಿದರೆ ದೊಡ್ಡ ದೊಡ್ಡ ಮನೆಗಳೂ ಮಂದಿರಗಳೂ ಕಾಣಿಸುತ್ತಿದ್ದುವು. ಅವುಗಳ ಕಿಟಕಿ, ಬಾಗಿಲು, ಮುಚ್ಚಿಗೆಗಳೆಲ್ಲ ಚಿನ್ನ ಬೆಳ್ಳಿಗಳಿಂದಲೇ ತಯಾರಾಗಿದ್ದುವು. ಆ ಮನೆಮಂದಿರಗಳ ಬಾಗಿಲುಗಳಲ್ಲಿ ಮುತ್ತು ಮಣಿ ಮಾಣಿಕ್ಯಗಳ ತೋರಣಗಳಿದ್ದುವು.

ವಾನರರು ಆಶ್ಚರ್ಯದಿಂದ ನೋಡುತ್ತ ಮತ್ತೊಂದು ಬದಿಗೆ ತಿರುಗಿದಾಗ, ಹವಳದ ಕಾಂತಿಯನ್ನುಗುಳುವ ಮರಗಳ ಮೇಲೆ ಹೂಗಳೂ ಹಣ್ಣುಗಳೂ ತೋರಿದುವು. ಒಂದು ಕಡೆ ಬಗೆಬಗೆಯ ಮದ್ಯಗಳನ್ನು ತುಂಬಿಸಿಟ್ಟಿದ್ದರು. ಅಲ್ಲಲ್ಲಿ ರತ್ನಗಳನ್ನು ಹುದುಗಿಸಿದ ಚಿನ್ನದ ಆಸನಗಳೂ, ಮಂಚಗಳೂ, ವಾಹನಗಳೂ ಕಂಡುಬಂದುವು. ಬೇರೊಂದು ಬದಿಯಲ್ಲಿ ಚಿನ್ನ ಬೆಳ್ಳಿ ಕಂಚುಗಳಿಂದಾದ ಬಗೆಬಗೆಯ ಆಕಾರದ ಪಾತ್ರಗಳು ರಾಶಿರಾಶಿಯಾಗಿದ್ದುವು. ಮಗದೊಂದು ಪ್ರದೇಶದಲ್ಲಿ ಅಗರು ಚಂದನಗಳ ಸುವಾಸನೆ ಹೊರಡುತ್ತಿದ್ದುವು. ಹಣ್ಣುಗಳು, ಗಡ್ಡೆಗಳು, ಗೆಣಸುಗಳು, ಪಾನೀಯಗಳು, ಜೇನು, ವಸ್ತ್ರಗಳು, ಕಂಬಳಿಗಳು, ಬೇರೆ ಬೇರೆ ಬಗೆಯ ಚರ್ಮಗಳು ಚಿನ್ನ ಬೆಳ್ಳಿಗಳ ಗಟ್ಟಿಗಳು ರಾಶಿರಾಶಿಯಾಗಿ ಅಲ್ಲಿದ್ದುವು.

ವಾನರರು ಆ ಅದ್ಭುತ ಪ್ರದೇಶವನ್ನು ಹುಡುಕುತ್ತಾ, ಹೆಜ್ಜೆಯ ಮೇಲೆ ಹೆಜ್ಜೆಯಿಟ್ಟು ನಡೆಯುತ್ತಿರಲು, ಒಂದು ಪ್ರಶಾಂತ ಪ್ರದೇಶದಲ್ಲಿ ಕುಳಿತಿದ್ದ

ತಪಸ್ವಿನಿಯೊಬ್ಬಳನ್ನು ನೋಡಿದರು. ಅವಳ ಶರೀರದಿಂದ ಪ್ರಕಾಶ ಕಿರಣಗಳು ಹೊರಡುತ್ತಿದ್ದುವು. ಅದನ್ನು ನೋಡಿ ವಾನರರು ಆಶ್ಚರ್ಯಪಡುತ್ತ ಭಯದಿಂದ ನಡುಗಿದರು.

ಹನುಮಂತನು ಅವಳ ಮುಂದೆ ಕೈಮುಗಿದು, "ನಾವೆಲ್ಲಾ ತಿಳಿಯದೆ ಈ ಪ್ರದೇಶಕ್ಕೆ ಬಂದೆವು. ನೀನು ಯಾರೋ ? ಈ ಬಿಲವು ಯಾರದೋ ? ಈ ಅದ್ಭುತ ಪ್ರದೇಶವು ಭೂಮಿಯಲ್ಲಿ ಏಕೆ ಇದೆಯೋ ? ನಮಗೊಂದೂ ಗೊತ್ತಾಗುವುದಿಲ್ಲ. ನಾವು ಮಾರ್ಗಾಯಾಸದಿಂದಲೂ, ಹಸಿವು ಬಾಯಾರಿಕೆಗಳಿಂದಲೂ ಸಂಕಟಪಡುತ್ತ ಇಲ್ಲಿ ಎಲ್ಲಿಯಾದರೂ ಆಹಾರವೋ ನೀರೋ ಸಿಗಬಹುದೆಂಬ ಆಶೆಯಿಂದ ಕತ್ತಲೆಯಾದ ಬಿಲದೊಳಗೆ ಹೊಕ್ಕು ಇಲ್ಲಿಗೆ ಬಂದಿದ್ದೇವೆ. ಆದರೆ ಇಲ್ಲಿರುವ ಅದ್ಭುತ ವಸ್ತುಗಳನ್ನೆಲ್ಲ ನೋಡಿದ ಮೇಲೆ, ಇದು ಯಾವುದೋ ರಾಕ್ಷಸರ ಮಾಯೆಯೋ ಎಂದು ಭಯವಾಗುತ್ತದೆ. ಈ ಬಂಗಾರದ ಮರಗಳೆಂದರೇನು ? ಆ ಬೆಳ್ಳಿ ಬಂಗಾರದ ಮನೆಗಳು ಯಾರವು ? ಕೊಳದಲ್ಲಿರುವ ಬಂಗಾರದ ತಾವರೆಗಳನ್ನು ಸೃಷ್ಟಿಸಿದವರು ಯಾರು ? ಬಂಗಾರದ ಮೀನು ಆಮೆ ಮೊಸಳೆಗಳೆಲ್ಲ ಯಾರ ಕಲ್ಪನೆಯೋ ? ಒಂದೂ ತಿಳಿಯದೆ ಅಯೋಮಯದ ಅವಸ್ಥೆಯಲ್ಲಿರುವ ನಮ್ಮ ಮೇಲೆ ದಯವಿಟ್ಟು ಅದನ್ನೆಲ್ಲ ತಿಳಿಸಿದರೆ ಒಳ್ಳೆಯದಿತ್ತು."

ಹನುಮಂತನ ಮಾತುಗಳಿಗೆ ಆ ತಪಸ್ವಿನಿ ತಲೆದೂಗಿ ಕಡೆಗೆ ಹೀಗೆ ಸಮಾಧಾನ ಹೇಳಿದಳು :

"ಮಯನೆಂಬ ದೊಡ್ಡ ದಾನವನು ಇಲ್ಲಿ ವಾಸವಾಗಿದ್ದನು. ಅವನು ದಾನವರಿಗೆಲ್ಲ ವಿಶ್ವಕರ್ಮ ಶಿಲ್ಪಿ. ಆತನ ಮಾಯಾಶಕ್ತಿಗಳಿಂದ ಈ ಪ್ರದೇಶವೆಲ್ಲಾ ಹೀಗೆ ಸೃಷ್ಟಿಯಾಗಿದೆ. ಅವನು ಇಲ್ಲಿ ದೊಡ್ಡ ತಪಸ್ಸು ಮಾಡಿ, ಬ್ರಹ್ಮಾಂಡದಷ್ಟು ಧನಸಂಪತ್ತನ್ನು ಬ್ರಹ್ಮನಿಂದ ವರವನ್ನಾಗಿ ಪಡೆದನು. ಅವನು ಹೇಮ ಎಂಬ ಅಪ್ಸರೆಯೊಂದಿಗೆ ಈ ಪ್ರದೇಶದಲ್ಲಿ ಸುಖವಾಗಿರುವಾಗ, ಇಂದ್ರನಿಗೆ ಕೋಪಬಂದು ಮಯನನ್ನು ವಜ್ರಾಯುಧದಿಂದ ಹೊಡೆದನು. ಆಮೇಲೆ ಬ್ರಹ್ಮನು ಈ ಪ್ರದೇಶ



ವನ್ನು ಹೇಮಳಿಗೇ ಕೊಟ್ಟನು. ನಾನು ಮೇರು ಸಾವರ್ಣಿಯ ಕುಮಾರಿ. ನನ್ನ ಹೆಸರು ಸ್ವಯಂಪ್ರಭೆ. ಹೇಮಳಿಗೆ ಸೇರಿದ ಈ ಪ್ರದೇಶವನ್ನು ರಕ್ಷಿಸುತ್ತ ಇಲ್ಲಿಯೇ ಇದ್ದೇನೆ. ಹೇಮ ನನ್ನ ಪರಮ ಸ್ನೇಹಿತೆ. ಅವಳು ಸಂಗೀತ ನೃತ್ಯಗಳಲ್ಲಿ ಪ್ರವೀಣಳಾದವಳು. ಅವಳು ನನಗೆ ಕೊಟ್ಟ ವರಗಳ ಕಾರಣದಿಂದ ನನ್ನನ್ನು ಯಾರೂ ಜಯಿಸುವಂತಿಲ್ಲ. ನೀವುಗಳು ಯಾವ ಕಾರಣಕ್ಕಾಗಿ ಪ್ರಯಾಣ ಹೊರಟು ಇಲ್ಲಿಗೆ ಬಂದಿರಿ ? ಪ್ರವೇಶಿಸಲಿಕ್ಕೆ ಸಾಧ್ಯವಿಲ್ಲದ ಈ ಸ್ಥಳಕ್ಕೆ ಅಷ್ಟು ಸಾಹಸ ಮಾಡಿ ಏಕೆ ಬಂದಿರಿ ? ತುಂಬಾ ದಣಿದಿದ್ದೀರಿ. ನೀವು ಮೊದಲು ಹಣ್ಣು ಮೊದಲಾದ ಆಹಾರ ತಿಂದು ನೀರು ಕುಡಿದು ನಿಮ್ಮ ವೃತ್ತಾಂತವನ್ನು ಏನೂ ಮುಚ್ಚಿಡದೆ ವಿಸ್ತಾರವಾಗಿ ಹೇಳಿರಿ."

ಅವಳು ಹೇಳಿದಂತೆ ವಾನರರೆಲ್ಲ ನಡೆದುಕೊಂಡರು. ಹನುಮಂತನು ಏನೂ ಮುಚ್ಚುಮರೆ ಮಾಡದೆ ತಮ್ಮ ಸಮಾಚಾರಗಳನ್ನು ಸ್ವಯಂಪ್ರಭೆಗೆ ವಿವರವಾಗಿ ಹೇಳಿದನು. ಕಡೆಗೆ ಅವನು ಅವಳೊಂದಿಗೆ, "ಅಮ್ಮಾ, ನೀನು ನಮಗೆ ಆಹಾರವಿತ್ತು ಪ್ರಾಣ ರಕ್ಷಣೆ ಮಾಡಿದೆ. ನಮ್ಮೆಲ್ಲರ ಹೃದಯವೂ ಕೃತಜ್ಞತೆಯಿಂದ ತುಂಬಿದೆ. ನಾವು ಏನುತಾನೇ ಪ್ರತ್ಯುಪಕಾರ ಮಾಡಬೇಕೋ ತಿಳಿಯದು. ನೀನೇ ನಮ್ಮಿಂದಾಗ ಬೇಕಾದುದನ್ನು ತಿಳಿಸಬೇಕು" ಎಂದನು.

"ಬಹಳ ಸಂತೋಷ. ನನಗೆ ನಿಮ್ಮಿಂದ ಯಾವ ಪ್ರತ್ಯುಪಕಾರವೂ ಬೇಡ. ನೀವು ಹೊರಟ ಕಾರ್ಯ ನೆರವೇರಿದರೆ ಸಾಕು. ಹಾಗಾಗುವಂತೆ ಹರಸುತ್ತೇನೆ." ಎಂದಳು ಸ್ವಯಂಪ್ರಭೆ.

"ಅಮ್ಮಾ, ಈಗಾಗಲೇ ಸುಗ್ರೀವನು ನಮಗಿತ್ತ ಗಡು ಮುಗಿದುಹೋಯಿತು. ಈ ಬಿಲದೊಳಗಿನಿಂದ ನಾವು ಹೊರಬೀಳುವ ದಾರಿ ನೀನೇ ತಿಳಿಸಬೇಕು. ನಮ್ಮನ್ನು ಕಾಪಾಡು. ನಾವು ಇದರೊಳಗೆ ಸಿಕ್ಕಿಕೊಂಡಿದ್ದರೆ ಸೀತಾದೇವಿಯನ್ನು ಹುಡುಕುವ ಕಾರ್ಯ ನಿಂತುಹೋಗುತ್ತದೆ." ಎಂದ ಹನುಮಂತ.

"ನಾನು ತಪಶ್ಶಕ್ತಿಯಿಂದ ನಿಮ್ಮನ್ನು ಹೊರಗೆ ಕಳುಹಿಸುತ್ತೇನೆ. ನೀವೆಲ್ಲರೂ ಕಣ್ಣು ಮುಚ್ಚಿಕೊಳ್ಳಿ" ಎಂದಳು ಸ್ವಯಂಪ್ರಭೆ.

ವಾನರರೆಲ್ಲ ಬೆರಳುಗಳಿಂದ ಕಣ್ಣುಗಳನ್ನು ಮುಚ್ಚಿಕೊಂಡರು. ಮರುಕ್ಷಣದಲ್ಲಿ ಅವರಿಗೆ ಬೇರೆಲ್ಲಿಯೋ ಇರುವ ಅನುಭವವಾಗಿ ಕಣ್ಣು ಬಿಡಿಸಿದರು. ಎಲ್ಲರೂ ಋಕ್ಷ ಬಿಲದ ಹೊರಬದಿಯಲ್ಲಿದ್ದಾರೆ.

ಪಕ್ಕದಲ್ಲಿ ನಿಂತಿದ್ದ ಸ್ವಯಂಪ್ರಭೆ ಅವರನ್ನು ಕುರಿತು, "ಋಕ್ಷ ಬಿಲದಿಂದ ನೀವೀಗ ಹೊರಗೆ ಬಂದಿದ್ದೀರಿ. ಇದು ವಿಂಧ್ಯ ಪರ್ವತ. ಅದು ಸಮುದ್ರ. ನಿಮಗೆಲ್ಲ ಶುಭವಾಗಲಿ !" ಎಂದು ಹೇಳಿ ಹಿಂದಿರುಗಿ ಗುಹೆಯೊಳಗೆ ಹೋದಳು.

